# ಜೇಹಾದ್ ಎಂದರೆ ಯುದ್ಧವಾ?




ರಚಿತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು



www.thraithashakam.org







# ಜೀಹಾದ್ ಎಂದರೆ ಯುದ್ಧವಾ?


ರಚಿತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ
ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

---

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**


---





ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಆಗಸ್ಟ್ –2016

ಪ್ರತಿಗಳು : 1000 **ಬೆಲೆ. 70/–**

## "ಇಂದೂ ಜ್ಞಾನವೇದಿಕೆ" ಪ್ರಚರಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ-ಉತ್ತರಗಳು.
03. ಧರ್ಮ-ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ-ಅಸತ್ಯವಾ?)
06. ದೆವ್ವಗಳಹಾಗೂ-ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ-ಮಹಿಮೆ (ಸತ್ಯವಾ-ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ- ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ-ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ-ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು-963.
38. ಮತ-ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು-ಆಸ್ತಿಕರು.
44. ಹೇತುವಾದ-ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## "ಇಂದೂ ಜ್ಞಾನವೇದಿಕೆ" ಪ್ರಕಟಣೆಗಳು

54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ – ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಇಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲ್ಲು (ಗೀಟುರಾಯಿ)



04

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು–
    ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ–
    ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
    ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
    ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
    ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
    ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
    ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ –
    ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ–
    ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು–
    ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು–
    ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು–
    ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ
    ಮಹೇಂದ್ರಜಾಲ,
    ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ
    (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು–
    ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು–
    ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಮಾಯ ಮರ್ಮಮು–ಆತ್ಮ ಧರ್ಮಮು
115. ಶ್ರೀಕೃಷ್ಣುಡು
     ಚನಿಪೋಯಾಡಾ? ಚಂಪಬಡ್ಡಾಡಾ?
116. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.



# ‘ಇಂದೂ ಜ್ಞಾನವೇದಿಕೆ’ ಗ್ರಂಥಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : **ಶ್ರೀನಿವಾಸ**–09705864675, **ಲಕ್ಷ್ಮೀನಾರಾಯಣಾಚಾರಿ**–09440556968.

**ವೆಂಕಟೇಶ್**–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಶ್ರೀಕೃಷ್ಣಾ ಮೆಡಿಕಲ್ಸ್, ಪಟೇಲ್‌ನಗರ್, 3ನೇ ರಸ್ತೆ, ಹೊಸಪೇಟೆ, ಬಳ್ಳಾರಿ (ಜಿಲ್ಲೆ). K.A
Cell:9611133635, 9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್, ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು (ಪೊ)
ಚಿಕ್ಕಸೂಗುರು (ತಾ), ರಾಯಚೂರು (ಜಿ)
Cell : 98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ವಾರ್ಡ್.ನೆಂ. –38,
ಬೆಂಗಳೂರು–560085
Cell : 9036982829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಬಸವರಾಜ ಅಂಗಡಿ**
(ಸಾ) (ಪೊ) ಪೋತ್ನಾಳ,
(ತಾ) ಮಾನವಿ, ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ ‘ಸಿ’ (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಮಾರುತಿ ಟೆನ್ಟ್ ರೋಡ್, ಚಾಮರಾಜ
ಮೊಹಲ್ಲ, ಮೈಸೂರ್–547097
Cell : 9986369118

**T.V. ರಮಣ**
ಕತ್ತರಗುಪ್ಪೆ, ವಾರ್ಡ್.ನೆಂ. –38,
ಬೆಂಗಳೂರು–560068
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್,
ವೈಟ್ ಫೀಲ್ಡ್ ರೋಡ್,
ಬೆಂಗಳೂರು–560066
Cell : 9482516023

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

# ಜೀಹಾದ್ ಎಂದರೆ ಯುದ್ಧವಾ? 09

ದೇವರು ಭೂಮಿಮೇಲೆ ಮುಖ್ಯವಾಗಿ ಮೂರು ಮತಗಳನ್ನು ಸೃಷ್ಠಿಸಿದ್ದಾನೆ. ಭೂಮಿಮೇಲೆ ಇನ್ನೂ ಕೆಲವು ಮತಗಳಿದ್ದರೂ ಜ್ಞಾನರೀತ್ಯಾ ಮುಖ್ಯವಾದವು ಮೂರು ಮತಗಳೆಂದೆ ಹೇಳಬಹುದು. ಒಂದು ಯಂತ್ರದಲ್ಲಿ ಹೊಟ್ಟನ್ನು, ಕಲ್ಲನ್ನು, ನುಚ್ಚನ್ನು, ಸ್ವಚ್ಛವಾದ ಕಾಳನ್ನು ಬೇರೆ ಮಾಡುವುದಕ್ಕೆ ಮೂರು ವಿಧಗಳ ಜಲರಡಿಗಳನ್ನು ಇಟ್ಟಂತೆ ದೇವರು ಸ್ವಾತ್ತ್ವಿಕರು, ರಾಜಸರು, ತಾಮಸರು ಎನ್ನುವವರಿಂದ ಸ್ವಚ್ಛವಾದ ಜ್ಞಾನಿಯನ್ನು ಬೇರೆ ಮಾಡುವುದಕ್ಕೆ ಹಿಂದೂ, ಕ್ರೈಸ್ತ, ಮುಸ್ಲಿಮ್‌ರೆನ್ನುವ ಮೂರು ಮತಗಳನ್ನು ದೇವರು ಏರ್ಪಡಿಸುವುದು ನಡೆದಿದೆ. ಈ ಮೂರು ಮತಗಳು ಜ್ಞಾನವನ್ನು ತಿಳಿಸಿ ಜ್ಞಾನಿಯನ್ನಾದರೂ ಮಾಡಬಲ್ಲವು, ಇಲ್ಲವೆ ಮೂರು ಮತಗಳು ಮಾಯೆಯಾಗಿ ತಯಾರಾಗಿ ಮನುಷ್ಯನನ್ನು ಅಜ್ಞಾನದಕಡೆಯಾದರೂ ಕಳಿಸಬಲ್ಲವು, ತನಗೆ ಇಷ್ಟಬಂದವರನ್ನು ಜ್ಞಾನಮಾರ್ಗದ ಕಡೆಗೆ ಕಳಿಸುವುದಕ್ಕೆ, ಇಷ್ಟವಿಲ್ಲದವರನ್ನು ಅಜ್ಞಾನಮಾರ್ಗದಕಡೆಗೆ ಕಳಿಸುವುದಕ್ಕೆ ದೇವರೇ ಈ ವಿಧವಾಗಿ ಮೂರು ಮತಗಳನ್ನು ತಯಾರು ಮಾಡಿದ್ದಾನೆ. ಮೂರು ಮತಗಳಲ್ಲಿ ಯಾವ ಮತದಲ್ಲಿರುವವನಾದರೂ, ಜ್ಞಾನದಕಡೆ ಹೋಗುವುದಕ್ಕೆ ಬೇಕಾದ ಜ್ಞಾನವನ್ನು ತಿಳಿಸುವುದಕ್ಕೆ, ಆ ಮತದಲ್ಲಿ ಮೊದಲೆ ಒಂದು ದೈವಗ್ರಂಥವನ್ನು ಇಡುವುದು ನಡೆದಿದೆ. ಆ ಮತದಲ್ಲಿರುವ ಗ್ರಂಥದಲ್ಲಿನ ಜ್ಞಾನ ಅರ್ಥವಾದರೆ ಜ್ಞಾನದಕಡೆ, ಅರ್ಥವಾಗದಿದ್ದರೆ ಅಜ್ಞಾನದಕಡೆ ಮನುಷ್ಯ ಹೋಗಬಲ್ಲನು. ಮನುಷ್ಯ ದೈವಗ್ರಂಥದಲ್ಲಿನ ವಿಷಯಗಳನ್ನು ನೋಡಿ ಜ್ಞಾನಿ ಆಗಬಹುದು, ಅಜ್ಞಾನಿ ಯಾಗಬಹುದು.

ದೈವಗ್ರಂಥವನ್ನು ನೋಡಿದರೂ! ಮನುಷ್ಯ ಅಜ್ಞಾನದಕಡೆ ಹೋಗುವುದಕ್ಕೆ ಅವಕಾಶವಿದ್ದಂತೆ, ದೈವಗ್ರಂಥದಲ್ಲಿ ಸಹ ಅಲ್ಲಲ್ಲಿ ಸ್ವಲ್ಪ ಅಜ್ಞಾನ ಕಾಣಿಸುವಂತೆ ದೇವರು ಏರ್ಪಾಟು ಮಾಡಿಟ್ಟಿದ್ದಾನೆ. ಮೊದಲು ಅಜ್ಞಾನವಾಗಿ ಕಾಣಿಸುವುದನ್ನು ಅನುಸರಿಸಿ ದೈವಗ್ರಂಥವನ್ನು ಒಟ್ಟಾರೆ ಅಜ್ಞಾನವಾಗಿಯೆ ಅರ್ಥಮಾಡಿಕೊಳ್ಳುವ ಅವಕಾಶ ಇದೆ. ಹಾಗೆ ಮೊದಲೆ ಜ್ಞಾನವಾಗಿ ಕಾಣಿಸಿದನ್ನನುಸರಿಸಿ ದೈವಗ್ರಂಥವನ್ನು ಮೊತ್ತವು ಜ್ಞಾನವಾಗಿಯೆ ಅರ್ಥಮಾಡಿಕೊಳ್ಳುವ ಅವಕಾಶವಿದೆ. ಈ ವಿಧವಾಗಿ

ದೇವರು ತನಗಿಷ್ಟವಾದವರನ್ನು ಜ್ಞಾನದಕಡೆ, ತನಗೆ ಇಷ್ಟವಿಲ್ಲದವರನ್ನು ಅಜ್ಞಾನದಕಡೆ ಕಳಿಸುವುದಕ್ಕೆ ಅನುಕೂಲವಾಗಿ ಮಾಡಿಟ್ಟುಕೊಂಡಿದ್ದಾನೆ. ದೇವರಮೇಲೆ ಇಷ್ಟ (ಶ್ರದ್ಧೆ) ಇರುವವನು ತನಗೆ ಇಷ್ಟವಾದವನೆಂದು, ಶ್ರದ್ಧೆಯಿಲ್ಲದವನು ಅಯಿಷ್ಟನೆಂದು ದೇವರು ಮೊದಲೆ ತನ್ನ ಗ್ರಂಥಗಳಲ್ಲಿ ಹೇಳಿದ್ದಾನೆ. ಇದರ ಪ್ರಕಾರ ಮನಷ್ಯನಲ್ಲಿನ ಇಷ್ಟತೆ, ಅಯಿಷ್ಟತೆಯನ್ನನುಸರಿಸಿ ಮನುಷ್ಯ ಇತ್ತ ಜ್ಞಾನದಕಡೆಯಾಗಲಿ, ಅತ್ತ ಅಜ್ಞಾನದಕಡೆಯಾಗಲಿ ಹೋಗುವುದಕ್ಕೆ ಅವಕಾಶವಿದೆ. ಇದೆಲ್ಲವೂ ಗ್ರಂಥಗಳನ್ನು ನೋಡಿ ಜ್ಞಾನಿಗಳಾಗಿ, ಅಜ್ಞಾನಿಗಳಾಗಿ ತಯಾರಾಗುವ ವಿಧಾನ. ಆ ವಿಧವಾಗಿ ಗ್ರಂಥಗಳನ್ನು ಎಷ್ಟು ಜನ ನೋಡುತ್ತಿದ್ದಾರೆ? ಅವರಲ್ಲಿ ಎಷ್ಟು ಜನ ಜ್ಞಾನಿಗಳಾಗಿ ತಯಾರಾಗುತ್ತಿದ್ದಾರೆಂದು ಲೆಕ್ಕಿಸಿದರು, ನೂರಕ್ಕೆ ತೊಂಭತ್ತು ಜನರು 90% ದೈವಗ್ರಂಥಗಳನ್ನು ನೋಡುತ್ತಿಲ್ಲ. ಕೇವಲ ಹತ್ತುಜನ 10% ಮಾತ್ರವೆ ಗ್ರಂಥಗಳನ್ನು ನೋಡುತ್ತಿದ್ದಾರೆ. ಹಾಗೆ ನೋಡಿದರೂ ನೋಡಿದವರಲ್ಲಿ ಸಾವಿರ ಜನರಲ್ಲಿ ಒಬ್ಬನಿಗೂ ಸಹ ಅದರಮೇಲೆ ಶ್ರದ್ಧೆಯಿರುವುದು ಅಪರೂಪವೇಯೆಂದು ಹೇಳಬಹುದು. ಇದರ ಪ್ರಕಾರ ಕೆಲವು ಲಕ್ಷಗಳಜನರಲ್ಲಿ ಒಬ್ಬನು ಮಾತ್ರ ದೈವಗ್ರಂಥಗಳಲ್ಲಿನ ಜ್ಞಾನವನ್ನು ತಿಳಿಯುತ್ತಾನೆ. ಅದೇ ವಿಧವಾಗಿ ಕೆಲವು ಲಕ್ಷಗಳಜನರಲ್ಲಿ ಹತ್ತುಜನ ಮಾತ್ರವೆ ಗ್ರಂಥಗಳ ಮೂಲಕ ಅಜ್ಞಾನಮಾರ್ಗದಲ್ಲಿ ನಡೆದುಕೊಳ್ಳುತ್ತಾ, ನಾವು ಗ್ರಂಥಗಳನ್ನು ಓದಿ ನಿಜವಾದ ಜ್ಞಾನವನ್ನು ತಿಳಿದುಕೊಂಡಿದ್ದೇವೆ ಎಂದು ಅಂದುಕೊಳ್ಳುತ್ತಿರುತ್ತಾರೆ. ಹೀಗೆ ಗ್ರಂಥಗಳ ಮೂಲಕ ಅಜ್ಞಾನದಲ್ಲಿರುವವರು, ತಾವು ಜ್ಞಾನದಲ್ಲಿ ಇದ್ದೇವೆಂದು ಭ್ರಮಿಸುತ್ತಾ, ಗ್ರಂಥಗಳನ್ನು ಓದದ ಸಾಮಾನ್ಯ ಪ್ರಜೆಗಳಿಗೆ ತಮ್ಮ ಅಜ್ಞಾನವನ್ನು ಅಂಟಿಸುತ್ತಿದ್ದಾರೆ.

ಕೆಲವು ಲಕ್ಷ ಜನರಲ್ಲಿ ಒಬ್ಬನು ಜ್ಞಾನಿಯಾಗಿ ಬದಲಾದರೂ, ಅವನು ಹೊರಗೆ ಮನುಷ್ಯರ ಸಂಬಂಧ ಇಟ್ಟುಕೊಳ್ಳದೆ ತನ್ನ ಮಾರ್ಗದಲ್ಲಿ ತಾನು ಹೋಗುತ್ತಿರುತ್ತಾನೆ. ಆದರೆ ನಾವು ಜ್ಞಾನಿಗಳು ಎಂದು ಭ್ರಮಿಸುತ್ತಿರುವವರು ಸಾಧಾರಣ ಮನುಷ್ಯರಜೊತೆ ಸಂಬಂಧ ಇಟ್ಟುಕೊಂಡು ತಮಗೆ ತಿಳಿದ ಜ್ಞಾನವನ್ನು ಹೇಳುತ್ತಿರುತ್ತಾರೆ. ಅಂತಹದರಲ್ಲಿ ಹೇಳುವವನಲ್ಲಿರುವ ಅಜ್ಞಾನ ಕೇಳುವವನೊಳಗು

ಸಹ ಪ್ರವೇಶಿಸುತ್ತದೆ. ಆದ್ದರಿಂದ ಕೇಳುವವನು ಸಹ ಅಜ್ಞಾನಿಯಾಗಿ ಬದಲಾಗುವ ಅವಕಾಶವಿದೆ. ಈ ದಿನ ಮೂರು ಮತಗಳಲ್ಲಿಯೂ ತಮ್ಮ ಗ್ರಂಥಗಳನ್ನು ಓದಿ, ತಾವು ಅದರಲ್ಲಿನ ಜ್ಞಾನವನ್ನು ತಿಳಿದುಕೊಂಡಿದ್ದೇವೆಂದು ಅಂದುಕೊಳ್ಳುವವರು ಮತ ಹಿರಿಯರಾಗಿ, ಗುರುಗಳಾಗಿ ಆಯಾ ಮತಗಳಲ್ಲಿ ಚಲಾವಣೆ ಆಗುತ್ತಿದ್ದಾರೆ. ಸಾಮಾನ್ಯ ಮನುಷ್ಯರಿಗೆ ಆಯಾ ಮತಗ್ರಂಥಗಳ ಜ್ಞಾನವನ್ನು ಬೋಧಿಸುತ್ತೇವೆಂದುಕೊಂಡು, ಮತಗ್ರಂಥಗಳಲ್ಲಿನ ಜ್ಞಾನವನ್ನು ಅಲ್ಲದೆ ಮತಗಳ ಜ್ಞಾನವನ್ನು ಬೋಧಿಸುತ್ತಿದ್ದಾರೆ. ಆಗ ಆ ಬೋಧನೆಗಳನ್ನು ಕೇಳಿದ ಪ್ರಜೆಗಳೆಲ್ಲರೂ ಗ್ರಂಥಗಳಲ್ಲಿನ ದೈವಜ್ಞಾನವನ್ನು ಅಲ್ಲದೆ, ಗ್ರಂಥಗಳಲ್ಲಿಲ್ಲದ ಮತಜ್ಞಾನವನ್ನು ತಿಳಿದುಕೊಂಡು ತಾವು ಮತದಕಡೆ ಹೋಗುತ್ತಿದ್ದಾರೆ ಹೊರತು, ದೇವರಕಡೆಯಾಗಲಿ ದೇವರ ಜ್ಞಾನದಕಡೆಯಾಗಲಿ ಹೋಗುತ್ತಿಲ್ಲ. ಆಯಾ ಮತಗಳಲ್ಲಿ ಗುರುಗಳಾಗಿ, ಮತಹಿರಿಯರಾಗಿ ಇರುವವರು ಏನೂ ತಿಳಿಯದ ಪ್ರಜೆಗಳಿಗೆ ತಮಗೆ ತಿಳಿದಿರುವುದೇ ಬೋಧಿಸುತ್ತಾ ಅವರಿಗೆ ಮಾರ್ಗದರ್ಶಕರಾಗಿ ಇದ್ದಾರೆ. ಅಷ್ಟೇ ಅಲ್ಲದೆ ತಮ್ಮ ಮಾತನ್ನು ಜವದಾಟದಂತೆ ಮತವೆಂಬ ಹಗ್ಗದಿಂದ ಕಟ್ಟಿಹಾಕಿ, ಅವರ ಇಷ್ಟಬಂದಂತೆ ಒಟ್ಟಾರೆ ಸಮಾಜವನ್ನು ನಡೆಸುತ್ತಿದ್ದಾರೆ.

ಯಾವ ಮತದಲ್ಲಿ ಆದರೂ, ಆ ಮತಹಿರಿಯರು ಹೇಳಿದಹಾಗೆ ಮತಸ್ಥರೆಲ್ಲರೂ ನಡೆಯುವಂತೆ ಏರ್ಪಾಟು ಮಾಡಿಕೊಂಡಿದ್ದಾರೆ. ಮತಹಿರಿಯರು ಹೇಳಿರುವವೆ ಆ ಮತ ಸಂಪ್ರದಾಯಗಳಾಗಿ ಲೆಕ್ಕಿಸಲ್ಪಡುತ್ತಿವೆ. ಮತಹಿರಿಯರು ಹೇಳಿದಂತೆ ಕೇಳದೆಹೋದರೆ ಮತಧಿಕ್ಕಾರವಾಗುತ್ತದೆಂಬ ಭಯದಿಂದ ಕೆಲವರೂ, ಪಾಪ ಬರುತ್ತದೇನೊ ಎಂದು ಕೆಲವರೂ, ದೇವರಿಗೆ ಕೋಪಬರುತ್ತದೇನೋ ಎಂದು ಕೆಲವರೂ, ಮತ ಪ್ರಜೆಗಳೆಲ್ಲರಲ್ಲಿ ವಿರುದ್ಧತೆ ಬರುತ್ತದೆಂದೂ ಕೆಲವರೂ ಮತಾಚಾರವನ್ನು ಅಲ್ಲವೆಂದರೆ ಏನಾದರೂ ಕಷ್ಟಬರುತ್ತದೇನೊ ಎಂದು ಕೆಲವರೂ, ಮತಹಿರಿಯರು ಹೇಳಿದಂತೆ ಕೇಳದೆಹೋದರೆ ಅವರ ಮತದಿಂದ ಬಹಿಷ್ಕರಿಸುತ್ತಾರೇನೊ ಎಂಬ ಭಯದಿಂದ ಕೆಲವರೂ, ಮತಹಿರಿಯರು ಹೇಳಿದಂತೆ ನಡೆದುಕೊಳ್ಳುವುದು ನಡೆಯುತ್ತಿದೆ. ಮತ ಹಿರಿಯರಾಗಿರುವವರಿಗೆ ಅವರ

ಮತಗ್ರಂಥಗಳಲ್ಲಿನ ವಿಷಯಗಳು ಅರ್ಥವಾಗಿವೆ ಎಂದು ಹೇಳುವುದಕ್ಕೆ ಸಾಧ್ಯವಿಲ್ಲ. ಏಕೆಂದರೆ! ಮತಹಿರಿಯರು ಹೇಳುವ ಸಂಪ್ರದಾಯಗಳು ಒಂದೂ ಸಹ ಮತಗ್ರಂಥಗಳಲ್ಲಿ ಇಲ್ಲದಿರುವುದೇ ಅದಕ್ಕೆ ನಿದರ್ಶನ. ಉದಾಹರಣೆಗೆ ಹಿಂದೂಗಳ ಸಂಪ್ರದಾಯಗಳಲ್ಲಿ ಯಾವೊಂದು ಸಹ ಹಿಂದೂಗಳ ದೈವಗ್ರಂಥವಾದ ಭಗವದ್ಗೀತೆಯಲ್ಲಿ ಇಲ್ಲ. ಮನುಷ್ಯ ಮರಣಿಸಿದಾಗ, ಹಿಂದೂಗಳಲ್ಲಿ ಸಂಪ್ರದಾಯದ ಪ್ರಕಾರ, ಕರ್ಮಕಾಂಡಗಳೆಂಬ ಹೆಸರಿನಿಂದ ಕೆಲವು ಕೆಲಸಗಳು ಮಾಡುವುದು ನಡೆಯುತ್ತಿದೆ. ಅವೆಲ್ಲವೂ ಹಿಂದೂಗಳು ಅವರ ಸಂಪ್ರದಾಯಗಳಾಗಿ ಅವುಗಳನ್ನು ಬರೆದುಕೊಂಡಿದ್ದಾರಾಗಲಿ, ಆ ಕೆಲಸಗಳು ಭಗವದ್ಗೀತೆಯಲ್ಲಿ ಹೇಳಲಿಲ್ಲ. ಹಿಂದೂಗಳ (ಇಂದೂಗಳ) ಜೀವನ ವಿಧಾನದಲ್ಲಿ ಎಷ್ಟೋ ಪದ್ಧತಿಗಳು ಆಚರಣೆಗಳ ರೂಪದಲ್ಲಿ ಇವೆ. ಹಾಗಿರುವ ಆಚರಣೆಗಳೆಲ್ಲವನ್ನು ಸಂಪ್ರದಾಯಗಳು ಎಂದು ಹೇಳುವುದೇ ಅಲ್ಲದೆ, ಇವು ಹಿಂದೂಗಳವು ಎಂದು ಎಲ್ಲರಿಗೂ ತಿಳಿಯುವಹಾಗೆ ಅವುಗಳಿಗೆ "ಹಿಂದೂ ಸಂಪ್ರದಾಯಗಳು" ಎಂದು ಹೆಸರು ಇಡುವುದು ನಡೆದಿದೆ.

ಈ ವಿಧವಾಗಿ ಪ್ರತಿ ಮತಕ್ಕು ಸಂಪ್ರದಾಯಗಳು ಇವೆ. ಆದರೆ ಕೆಲವು ಸಂಪ್ರದಾಯಗಳು ಜ್ಞಾನಕ್ಕೆ ಹತ್ತಿರವಾಗಿರಬಹುದಾಗಲಿ, ದೈವಜ್ಞಾನ ಎಷ್ಟುಮಾತ್ರ ಅಲ್ಲ. ಹಿಂದೂಗಳಲ್ಲಿ ಪೂರ್ವದಲ್ಲಿ ಎಷ್ಟೋ ಸಂಪ್ರದಾಯಗಳು ಇರುತ್ತಿದ್ದವು. ಆದರೆ ಕಾಲಕ್ರಮೇಣ ಅವು ಕೆಲವು ಇಲ್ಲದಂತೆಹೋಗಿ ಕೆಲವು ಮಾತ್ರ ಉಳಿದಿವೆ. ಪೂರ್ವದಲ್ಲಿರುವ ಹಿಂದೂ ಸಂಪ್ರದಾಯಗಳಲ್ಲಿ ಸುಮಾರು ಐವತ್ತುವರ್ಷಗಳ ಪೂರ್ವದಲ್ಲಿ ಒಂದು ಸಂಪ್ರದಾಯವಿತ್ತು. ಅದು ಈಗ ಐವತ್ತು ವರ್ಷಗಳಿಂದ ಕಾಣಿಸುತ್ತಿಲ್ಲ ನನ್ನ ಚಿಕ್ಕವಯಸ್ಸಿನಲ್ಲಿ ಆ ಸಂಪ್ರದಾಯವನ್ನು ಆಚರಿಸುವವರನ್ನು ನಾನು ನೋಡಿದ್ದೇನೆ. ಒಂದು ಮುಖ್ಯವಾದ ಕಾರ್ಯನಿಮಿತ್ತ ಹೊರಗೆ ಹೋಗುವ ಹಿಂದೂಗಳು, ತಾವು ನಿವಾಸಿಸುತ್ತಿರುವ ಮನೆಯ ಮುಖದ್ವಾರದ ಹತ್ತಿರವಿರುವ ಹೊಸ್ತಿಲಿಗೆ ನಮಸ್ಕಾರ ಮಾಡಿಕೊಂಡು ಹೋಗುತ್ತಿದ್ದರು. ಪುರುಷರು ಹೊಸ್ತಿಲನ್ನು ಹೆತ್ತ ತಾಯಿಯಾಗಿ ಭಾವಿಸಿ ನಮಸ್ಕರಿಸುವುದಲ್ಲದೆ, ಸ್ತ್ರೀಯರು ಹೊಸ್ತಿಲನ್ನು

ಲಕ್ಷ್ಮೀದೇವಿಯಾಗಿ ಭಾವಿಸಿ ಬೆಳಿಗ್ಗೆ, ಸಾಯಂಕಾಲ ಸಂಧಿ ವೇಳೆಯಲ್ಲಿ ಪೂಜಿಸುತ್ತಿದ್ದರು. ಪ್ರಸ್ತುತ ಕಾಲದಲ್ಲಿ ಗಂಡಸರು ಮನೆಹೊಸ್ತಲಿಗೆ ಮುಗಿಯುವುದು ಕಾಣಿಸುವುದಿಲ್ಲ ಆದರೆ, ಸ್ತ್ರೀಯರು ಅಲ್ಲಲ್ಲಿ ಹಳ್ಳಿಗಳಲ್ಲಿ ಈಗಲೂ ಮನೆಮುಂದೆ ನೀರುಚೆಲ್ಲಿ, ರಂಗೋಲಿಹಾಕಿ ಹೊಸ್ತಿಲ ಹತ್ತಿರ ಅಗರಬತ್ತಿಗಳನ್ನು ಹಚ್ಚಿ ಹೊಸ್ತಿಲಿಗೆ ಅರಿಶಿನ, ಕುಂಕುಮ ಬೊಟ್ಟುಗಳಿಟ್ಟು ನಮಸ್ಕರಿಸುವುದು ನಡೆಯುತ್ತಿದೆ. ಪೂರ್ವದಲ್ಲಿ ಹಿಂದೂಗಳ ಕುಟುಂಬಗಳೆಲ್ಲವನ್ನು ಉದಯ ಸಾಯಂಕಾಲ ಮನೆಹೊಸ್ತಿಲಿಗೆ ನಮಸ್ಕರಿಸುವುದು ಮುಖ್ಯವಾದ ಸಂಪ್ರದಾಯವಾಗಿ ಇಟ್ಟುಕೊಂಡು ಆಚರಿಸುತ್ತಿದ್ದರು.

ಈ ವಿಧವಾಗಿ ಎಲ್ಲಾ ಮತಗಳಲ್ಲಿಯೂ ಅವರ ಮತಹಿರಿಯರು ಏರ್ಪಡಿಸಿದ ಸಂಪ್ರದಾಯಗಳು, ಅವರವರ ಮತಗಳಿಗೆ ತಕ್ಕಂತೆ ಬೇರೆಬೇರೆಯಾಗಿ ಇರುತ್ತಿದ್ದವು. ಅವರವರ ಮತವನ್ನು ಬಲಪಡಿಸಿಕೊಳ್ಳುವುದಕ್ಕೆ, ಮತಗಳಲ್ಲಿರುವ ವರು ಅದೇ ಮತದಲ್ಲಿ ಇರುವುದಕ್ಕೂ, ಎಲ್ಲಾ ಮತಗಳಿಗಿಂತ ತಮ್ಮ ಮತ ದೊಡ್ಡದೆಂದು ಪ್ರಕಟಿಸಿಕೊಳ್ಳುವುದಕ್ಕೂ, ಮತದಲ್ಲಿನವರು ಮತವನ್ನು ಬಿಟ್ಟು ಪರಮತದೊಳಗೆ ಹೋಗದಂತಿರುವುದಕ್ಕೆ ಸಂಪ್ರದಾಯಗಳನ್ನು ತಯಾರು ಮಾಡಿಕೊಂಡಿದ್ದಾರೆ. ಒಂದು ರಾಜ್ಯಕ್ಕೆ ಒಂದು ಗುರುತಿಗಾಗಿ ಬಾವುಟ (ಜೆಂಡಾ) ಇದ್ದಂತೆ, ಮತಕ್ಕೆ ಬಾವುಟಗಳಿದ್ದಂತೆ ಸಂಪ್ರದಾಯಗಳು ಇರುತ್ತಿದ್ದವು. ಒಂದು ಬಾವುಟವನ್ನು ನೋಡಿ ಇದು ಇಂತಹ ದೇಶದವರದೆಂದು ನಾವು ಗುರುತಿಸುವಂತೆ, ಒಂದು ಸಂಪ್ರದಾಯ ಆಚರಣೆಯನ್ನು ನೋಡಿದಾಗ ಇದು ಇಂತಹ ಮತ ಸಂಪ್ರದಾಯ ಎಂದು ಗುರುತಿಸುವಂತೆ, ಎಲ್ಲಾ ಮತಗಳಿಗು ಸಂಪ್ರದಾಯಗಳನ್ನು ಆಯಾ ಮತಹಿರಿಯರು ತಯಾರು ಮಾಡಿದ್ದಾರೆ. ಎಷ್ಟು ಮತಗಳಲ್ಲಿ, ಎಷ್ಟು ಸಂಪ್ರದಾಯಗಳಿದ್ದರೂ ಅವೆಲ್ಲವೂ ಮನುಷ್ಯರು ತಯಾರು ಮಾಡಿರುವವೆ ಆಗಿರುವುದರಿಂದ, ಅವುಗಳಲ್ಲಿ ದೇವರ ಜ್ಞಾನ ಇಲ್ಲವೆಂದು ಹೇಳಬಹುದು. ದೇವರು ಹೇಳಿದ ಗ್ರಂಥಗಳಲ್ಲಿ ಜ್ಞಾನವಿದೆಯಾಗಲಿ, ಮನುಷ್ಯರು ಹೇಳಿದ ಸಂಪ್ರದಾಯಗಳಲ್ಲಿ ಜ್ಞಾನವಿಲ್ಲವೆಂದು ಹೇಳಬಹುದು. ಜ್ಞಾನ ಇಲ್ಲದಿರುವುದಲ್ಲದೆ, ದೇವರ ಜ್ಞಾನಕ್ಕೆ ವಿರುದ್ಧವಾದ ಅಧರ್ಮಗಳು ಸಂಪ್ರದಾಯಗಳಲ್ಲಿ ಕಾಣಿಸುತ್ತಿವೆ.

ಸಂಪ್ರದಾಯಗಳಲ್ಲಿ ಅಜ್ಞಾನ ಹೇಗೆ ಇದೆಯೆಂದು ಹೇಳುವುದಕ್ಕೆ ಉದಾಹರಣೆಯಾಗಿ ಹಿಂದೂಗಳ ಸಂಪ್ರದಾಯವಾದ ಮನೆಹೊಸ್ತಿಲಿಗೆ ನಮಸ್ಕರಿಸುವುದೆಂಬ ಆಚರಣೆಯನ್ನು ತೆಗೆದುಕೊಂಡು ನೋಡೋಣ. ಮನೆಹೊಸ್ತಿಲನ್ನು ಒಂದು ದೇವತೆಗೆ ಹೋಲಿಸಿ ಮುಗಿಯುವುದರಿಂದ, ಅಗರಬತ್ತಿಗಳಿಂದ ಪೂಜಿಸುವುದರಿಂದ, ದೇವರನ್ನು ಬಿಟ್ಟು ದೇವರು ಸೃಷ್ಟಿಸಿದ ದೇವತೆಗಳನ್ನು ಮುಗಿದಂತಾಗುತ್ತದೆ. ಹಾಗೆ ಮಾಡುವುದರಿಂದ ಭಗವದ್ಗೀತೆಯಲ್ಲಿ ದೇವರು ಹೇಳಿದ ಜ್ಞಾನಕ್ಕೆ ವಿರುದ್ಧವಾಗಿ ಪ್ರವರ್ತಿಸಿದಂತಾಗುತ್ತದೆ. **"ದೇವತೆಗಳನ್ನು ಮುಗಿಯುವವರು ನನ್ನನ್ನು ಸೇರಲಾರರು"** ಎಂದು ಭಗವಂತನು ಹೇಳಿದ ಮಾತಿಗೆ ಬೆಲೆ ಕೊಡದಂತೆ ದೇವತೆಗಳನ್ನು ಮುಗಿದು ದೇವರನ್ನು ಬಿಟ್ಟಂತಾಗುತ್ತದೆ ಮನೆಹೊಸ್ತಿಲಿಗೆ ಮುಗಿಯುವ ಹಿಂದೂಸಂಪ್ರದಾಯ ಯಾವ ವಿಧವಾಗಿ ನೋಡಿದರೂ, ಅಜ್ಞಾನಕ್ಕೆ ಸಂಬಂಧಿಸಿರುವುದಾಗಿಯೆ ಕಾಣಿಸುತ್ತಿದೆ ಹೊರತು ಜ್ಞಾನವಾಗಿ ಕಾಣಿಸುತ್ತಿಲ್ಲ. ಇದೇ ವಿಧವಾಗಿ ಎಲ್ಲಾ ಮತಗಳಲ್ಲಿಯೂ ಆಯಾ ಮತಸಂಪ್ರದಾಯಗಳು ಇವೆಯೆಂದು ತಿಳಿಯುತ್ತದೆ. ಸಂಪ್ರದಾಯಗಳು ಯಾವೊಂದು ದೈವಗ್ರಂಥದೊಂದಿಗೆ ಸಂಬಂಧವಿಲ್ಲ. ಮನುಷ್ಯರಾದ ಮತಹಿರಿಯರು ತಿಳಿಸಿದ ಸಂಪ್ರದಾಯಗಳು ಯಾವ ವಿಧವಾಗಿಯಾದರೂ ದೇವರ ಜ್ಞಾನಕ್ಕೆ ವಿರುದ್ಧವಾಗಿಯೇ ಇವೆ. ಕೆಲವು ಸಂಪ್ರದಾಯಗಳು ದೇವರಿಗೆ ಹತ್ತಿರವಾಗಿರುವಂತೆ ಕಾಣಿಸಿದರೂ, ಕೊನೆಗವು ದೇವರಿಗೆ ದೂರವಾಗಿಯೆ ಇವೆ. ಮುಖ್ಯವಾಗಿ ಸಂಪ್ರದಾಯಗಳೆಂಬುವವು ಕ್ರೈಸ್ತ ಸಮಾಜಕ್ಕಿಂತ ಹೆಚ್ಚಾಗಿ ಹಿಂದೂಗಳಲ್ಲಿಯೂ, ಮುಸ್ಲಿಮ್‌ರಲ್ಲಿಯೂ ಕಾಣಿಸುತ್ತಿವೆ. ಹಿಂದೂಗಳಲ್ಲಿ ಪೂರ್ವವಿದ್ದು ಈಗ ಇಲ್ಲದಂತೆ ಹೋಗಿರುವವು ಎಷ್ಟೊ ಸಂಪ್ರದಾಯುಗಳಿರುವಾಗ, ಮುಸ್ಲಿವ್‌ರಲ್ಲಿ ಹಿಂದೂಗಳಿಗಿಂತ ಹೆಚ್ಚಾಗಿ ಸಂಪ್ರದಾಯಗಳಿವೆಯೆಂದು, ಹಿರಿಯರು ಹೇಳಿದ ಸಂಪ್ರದಾಯಗಳನ್ನು ಅವರು ತಪ್ಪದೇ ಆಚರಿಸುತ್ತಿದ್ದಾರೆಂದು ಅರ್ಥವಾಗುತ್ತಿದೆ.

ಹಿಂದೂಗಳಲ್ಲಿ ಹಿರಿಯರು ಇಟ್ಟಿರುವ ಸಂಪ್ರದಾಯಗಳು ಎಷ್ಟೋ ಕಣ್ಮರೆಯಾಗಿಹೋಗಿವೆ. ಆದರೆ ಮುಸ್ಲಿಮ್ ಸಮಾಜದಲ್ಲಿ ಅವರ ಹಿರಿಯರು ಇಟ್ಟಿರುವ ಸಂಪ್ರದಾಯಗಳಲ್ಲಿ ಯಾವೊಂದು ಸಹ ಹೋಗದಂತೆ ಎಲ್ಲಾ

ಆಚರಿಸಲ್ಪಡುತ್ತಿವೆ. ಮುಸ್ಲಿಮ್‌ರ ಜೀವನದಲ್ಲಿ ಸಂಪ್ರದಾಯಗಳು ಪೂರ್ತಿಯಾಗಿ ಬೆರೆತುಹೋಗಿರುವುದರಿಂದ, ಅವರ ಜೀವನ ವಿಧಾನವೆಲ್ಲವೂ ಸಂಪ್ರದಾಯ ಮಯವಾಗಿ ಹೋಗಿದೆ. ಉದಾಹರಣೆಗೆ ಮುಸ್ಲಿಮ್ ಪುರುಷರು ನಾವು ಮುಸ್ಲಿಮ್ ಪುರುಷರು, ನಮ್ಮ ಜೀವನ ವಿಧಾನವಿದು ಎನ್ನುವಂತೆ, ಗಡ್ಡ ಬೆಳೆಸಿರುತ್ತಾರೆ. ಹಾಗೆ ಮುಸ್ಲಿಮ್ ಸ್ತ್ರೀಯರು ನಾವು ಮುಸ್ಲಿಮ್ ಸ್ತ್ರೀಯರು, ನಮ್ಮ ಜೀವನ ವಿಧಾನವಿದು ಎನ್ನುವಂತೆ ಶರೀರವೆಲ್ಲಾ ಕಪ್ಪನೆಯ ಮುಸುಗು ಧರಿಸಿ ಕಾಣಿಸುತ್ತಿರುತ್ತಾರೆ. ವಾಸ್ತವವಾಗಿ ಮುಸ್ಲಿಮ್‌ರ ಸಂಪ್ರದಾಯಗಳಾದ ಗಂಡಸರ ಗಡ್ಡವಾಗಲಿ, ಹೆಂಗಸರ ಮುಸುಗಾಗಲಿ ಮುಸ್ಲಿವ್ ಮತಹಿರಿಯರು ಏರ್ಪಡಿಸಿರುವವೆಯಾಗಲಿ ದೇವರು ಹೇಳಿರುವವು ಅಲ್ಲ. ಮುಸ್ಲಿಮ್‌ರು ನಮ್ಮ ಗ್ರಂಥವೆಂದು ಹೇಳಿಕೊಳ್ಳುವ ಖುರ್‌ಆನ್ ಗ್ರಂಥದಲ್ಲಿ ಎಲ್ಲಿಯಾಗಲಿ ಮುಸ್ಲಿಮ್ ಆದವರು ಗಡ್ಡ ಧರಿಸಬೇಕೆಂದಾಗಲಿ, ಸ್ತ್ರೀಯರು ಮುಸುಗು ಧರಿಸಬೇಕೆಂದಾಗಲಿ ಇಲ್ಲ. ದೈವಗ್ರಂಥವೆಂದು ಹೆಸರುವಾಸಿಯಾದ ಖುರ್‌ಆನ್ ಗ್ರಂಥದಲ್ಲಿ ಮುಸ್ಲಿಮ್ ಸಂಪ್ರದಾಯಗಳು ಒಂದು ಸಹ ಇಲ್ಲ. ಆದ್ದರಿಂದ ಸಂಪ್ರದಾಯಗಳನ್ನು ಆಯಾ ಮತಸ್ಥರು ತಯಾರು ಮಾಡಿದ್ದಾರಾಗಲಿ, ದೇವರು ಹೇಳಲಿಲ್ಲವೆಂದು ತಿಳಿಯುತ್ತದೆ. ದೇವರು ಹೇಳಿರುವುದು ದೈವ ಜ್ಞಾನವಾಗುತ್ತದೆ. ಮನುಷ್ಯರು ಹೇಳಿರುವುದು ದೈವಜ್ಞಾನದ ಕೆಳಗೆ ಜಮಕಟ್ಟಲ್ಪಡುವುದಿಲ್ಲ. ದೈವಜ್ಞಾನವಾಗಲಿ ಸಂಪ್ರದಾಯಗಳು ಪ್ರಪಂಚದಲ್ಲಿ ಒಂದು ಪದ್ಧತಿಯಾದ ಜೀವನ ವಿಧಾನವನ್ನು ತೋರಿಸುತ್ತಿವೆಯಾಗಲಿ, ದೈವಜ್ಞಾನವನ್ನು ತೋರಿಸಲಾರವು. ಅದರಲ್ಲಿ ದೈವಜ್ಞಾನ ಇರುವುದಿಲ್ಲ. ಸಂಪ್ರದಾಯಗಳಿಗೂ ದೈವಜ್ಞಾನಕ್ಕೂ ಎಂತಹ ಸಂಬಂಧವೂ ಇರುವುದಿಲ್ಲ. ಇದೆಲ್ಲವೂ ಮುಸ್ಲಿಮ್‌ರ ಸಂಪ್ರದಾಯಗಳ ವಿಷಯ.

ಹಿಂದೂಗಳ ಸಂಪ್ರದಾಯ ವಿಷಯದೊಳಗೆ ಬಂದರೆ, ಹಿಂದೂ ಸಂಪ್ರದಾಯಗಳು ಸಹ ದೈವ ಗ್ರಂಥವಾದ ಭಗವದ್ಗೀತೆಯಲ್ಲಿ ಹೇಳಲ್ಪಡಲಿಲ್ಲ. ಆದ್ದರಿಂದ ಹಿಂದೂಸಂಪ್ರದಾಯಗಳಿಗೂ ದೈವಜ್ಞಾನಕ್ಕೂ ಸಂಬಂಧ ಇಲ್ಲವೆಂದು ಹೇಳಬಹುದು. ಆದರೆ ಇಲ್ಲಿ ಸ್ವಲ್ಪ ವಿವರವಾಗಿ ತಿಳಿಯಬೇಕಾದ ವಿಷಯವಿದೆ.

ಅದೇನೆಂದರೆ! ಕೃತಯುಗದಲ್ಲಿ ಮತಗಳ ಪ್ರಸಕ್ತಿಯೇ ಇಲ್ಲ. ಮತಗಳೆಲ್ಲ ಕಲಿಯುಗದಲ್ಲಿ ಸೃಷ್ಟಿಸಲ್ಪಟ್ಟಿವೆ. ಕೃತ, ತ್ರೇತಾ, ದ್ವಾಪರ ಯುಗಗಳಲ್ಲಿ ಮತಗಳ ಪ್ರಸಕ್ತಿ ಇಲ್ಲ. ಆದ್ದರಿಂದ ಕೃತಯುಗದಲ್ಲಿಯೇ ತಯಾರಾದ ಹಿಂದೂ (ಇಂದೂ) ಸಂಪ್ರದಾಯಗಳು ದೈವಜ್ಞಾನವನ್ನು ಆಧಾರ ಮಾಡಿಕೊಂಡು ತಯಾರಾಗಿವೆ. ಮತ ಎಂಬುದು ಇಲ್ಲವಾದ್ದರಿಂದ, ಆ ದಿನ ಇರುವುದು ಇಂದೂ ಸಮಾಜ ಹೊರತು ಇತರ ಸಮಾಜ ಯಾವುದು ಇಲ್ಲದಿರುವುದರಿಂದ, ಮತದ ಮೇಲೆ ಆಧಾರಪಟ್ಟು ಸಂಪ್ರದಾಯಗಳನ್ನು ತಯಾರು ಮಾಡಲಿಲ್ಲ. ಆದ್ದರಿಂದ ಹಿಂದೂ ಸಂಪ್ರದಾಯಗಳು ಜ್ಞಾನವೊಂದರ ಆಧಾರದಿಂದಲೇ ತಯಾರಾಗಿವೆ. ಉದಾಹರಣೆಗೆ ಮದುವೆ ವಿಷಯದಲ್ಲಿ ಆಚರಿಸುವ ಸಂಪ್ರದಾಯಗಳು ಭಗವದ್ಗೀತೆಯಲ್ಲಿ ಇಲ್ಲದಿದ್ದರೂ, ಜ್ಞಾನವೊಂದರ ಸಾರಾಂಶವನ್ನು ಆಧಾರ ಮಾಡಿಕೊಂಡು, ಸಂಪ್ರದಾಯಗಳಲ್ಲಿ ಜ್ಞಾನವೇ ಕಾಣಿಸುವಂತೆ ಮದುವೆ ಸಂಪ್ರದಾಯಗಳನ್ನು ತಯಾರು ಮಾಡಿದ್ದಾರೆ. ಆದ್ದರಿಂದ ಇಂದೂ ಮದುವೆಯಲ್ಲಿರುವ ಆಚರಣೆಯೆಲ್ಲವೂ ಪೂರ್ತಿಯಾಗಿ ದೈವಜ್ಞಾನದಿಂದ ಕೂಡಿವೆ. ಇಂದೂ ಸಂಪ್ರದಾಯಗಳಿಂದ ದೈವಜ್ಞಾನ ತಿಳಿಯಲ್ಪಡುತ್ತಿದೆಯಾಗಲಿ, ಪ್ರಪಂಚ ಮತವಾಗಲಿ, ಪ್ರಪಂಚ ಜ್ಞಾನವಾಗಲಿ ತಿಳಿಯಲ್ಪಡಲಿಲ್ಲ.

ದ್ವಾಪರಯುಗದ ನಂತರ ಬಂದಿರುವ ಕಲಿಯುಗದಲ್ಲಿ ಮೂರುಸಾವಿರ ವರ್ಷಗಳ ನಂತರ ಕ್ರೈಸ್ತ ಬಂದು, ಅದು ಒಂದು ಮತವಾಗಿ ಲೆಕ್ಕಿಸಲ್ಪಡುವುದರಿಂದ, ಅದಕ್ಕಿಂತ ಮೊದಲೇ ಇದ್ದ ಇಂದೂ ಸಮಾಜವನ್ನು ಪ್ರತ್ಯೇಕವಾಗಿ ಗುರುತಿಸಬೇಕಾಗಿ ಬಂದಿದೆ. ನಂತರ ಆರುನೂರು ವರ್ಷಗಳಿಗೆ ಬಂದಿರುವ ಇಸ್ಲಾಮ್‌ನಿಂದ ಮುಸ್ಲಿಮ್ ಮತ ಏರ್ಪಟ್ಟಿದೆ. ಕ್ರೈಸ್ತಮತ, ಮುಸ್ಲಿಮ್ ಮತ ಏರ್ಪಟ್ಟ ನಂತರ ಇಂದೂ ಸಮಾಜಕ್ಕೂ ಸಹ ಇಂದೂ ಮತ ಎಂದು ಹೆಸರಿಡಲಾಗಿದೆ. ಕಾಲಕ್ರಮೇಣ ಇಂದೂಮತ ಸ್ವಲ್ಪ ಶಬ್ದ ಬದಲಾವಣೆಯಿಂದ ಹಿಂದೂಮತವಾಗಿ ತಯಾರಾಗಿದೆ. ಎಂದೋ ಕೃತಯುಗದಲ್ಲಿ ಹುಟ್ಟಿದ ಇಂದೂ ಸಮಾಜಕ್ಕೆ ಹಿಂದೂಮತವೆಂಬ ಹೆಸರಿಲ್ಲ ಆದ್ದರಿಂದ ಇಂದೂಸಂಪ್ರದಾಯಗಳಲ್ಲಿ ಜ್ಞಾನ ಹೊರತು ಮತವಿಲ್ಲ.

ಈ ದಿನ ತಯಾರಾದ ಕ್ರೈಸ್ತ, ಮುಸ್ಲಿಮ್ ಸಮಾಜಗಳಲ್ಲಿ ಮತ ಪ್ರದರ್ಶನ ಹೊರತು ಜ್ಞಾನ ಪ್ರದರ್ಶನ ಇಲ್ಲ. ಆದ್ದರಿಂದ ಆಯಾಮತಗಳಲ್ಲಿನ ಎಲ್ಲಾ ಸಂಪ್ರದಾಯಗಳಲ್ಲಿ ಮತ ಕಾಣಿಸುತ್ತಿದೆಯಾಗಲಿ, ದೈವಜ್ಞಾನ ಕಾಣಿಸುತ್ತಿಲ್ಲ. ಆಯಾ ಮತಗಳಲ್ಲಿ ಸಂಪ್ರದಾಯಗಳನ್ನು ಬರೆದುಕೊಂಡ ಗ್ರಂಥಗಳು ಪ್ರತ್ಯೇಕಿಸಿ ಇವೆ. ಮುಸ್ಲಿಮ್ ಮತದಲ್ಲಿ ಅವರ ಸಂಪ್ರದಾಯಗಳನ್ನು ತಿಳಿಸುವ ಪ್ರತ್ಯೇಕವಾದ "ಹದೀಸು" ಗ್ರಂಥಗಳು ಇವೆ.

ಇಂದೂ (ಹಿಂದೂ) ಮತದಲ್ಲಿ ಸಂಪ್ರದಾಯರೂಪಗಳಾಗಿ ಇರುವ ವೆಲ್ಲವೂ ಜ್ಞಾನದಿಂದ ಕೂಡಿಕೊಂಡು ಇದ್ದರೂ, ನಂತರ ಬಂದಿರುವ ಮುಸ್ಲಿಮ್, ಕ್ರೈಸ್ತಮತಗಳನ್ನು ನೋಡಿ ಕೆಲವರು ಹಿಂದೂಗಳು ತಮ್ಮ ಆಚಾರಗಳಲ್ಲಿ ಕೆಲವನ್ನು ಸೇರಿಸಿಕೊಂಡು ಕಟ್ಟು, ಬೊಟ್ಟು, ಜುಟ್ಟು ವ್ಯವಹಾರಗಳನ್ನು ಪ್ರತ್ಯೇಕಿಸಿ ತಂದು ಕೊಂಡಿದ್ದಾರೆ. ಪೂರ್ವದಲ್ಲಿಯೇ ಕಟ್ಟು, ಬೊಟ್ಟು, ಜುಟ್ಟು ಹಿಂದೂಗಳಲ್ಲಿ ಇದ್ದರೂ ಅವು ಜ್ಞಾನದಿಂದ ಕೂಡಿಕೊಂಡಿರುತ್ತಿದ್ದವು. ಆದರೆ ದ್ವಾಪರಯುಗದ ನಂತರ ಕಲಿಯುಗದಲ್ಲಿ ಮೂರು ಸಾವಿರ ವರ್ಷಗಳ ನಂತರ, ಈಗಲೂ ಎರಡು ಸಾವಿರ ವರ್ಷಗಳಿಂದ ಕಟ್ಟು, ಬೊಟ್ಟು, ಜುಟ್ಟು ವಿಷಯಗಳಲ್ಲಿ ಸ್ವಲ್ಪ ಬದಲಾವಣೆ ಬಂದು ಇವು ಮತಕ್ಕೆ ಸಂಬಂಧಿಸಿದ ಗುರುತುಗಳಾಗಿ ಹೇಳಿಕೊಳ್ಳುವುದು ನಡೆದಿದೆ. ಪಂಚೆಕಟ್ಟುವ ನೆರೆಗೆಗಳ ಮಡತೆಗಳಲ್ಲಿ ಬದಲಾವಣೆಬಂದಿದೆ. ಪೂರ್ವದಲ್ಲಿ ಏಳು ಮಡತೆಗಳ ನೆರೆಗೆಗಳನ್ನು ಪಂಚೆಕಟ್ಟುವುದರಲ್ಲಿ ಗಂಡಸರೂ, ಸೀರೆ ಉಡುವುದರಲ್ಲಿ ಸ್ತ್ರೀಯರು ಇಡುವುದು ನಡೆದಿದೆ. ಈ ದಿನ ಏಳು ಮಡತೆಗಳ ಸಂಪ್ರದಾಯ ಇಲ್ಲದಂತಾಗಿದೆ. ಅದರಿಂದ ಹಿಂದೂಗಳಲ್ಲಿ ಪಂಚೆಕಟ್ಟುವುದು, ಸೀರೆ ಕಟ್ಟುವುದು ಈದಿನ ಮತ ಸಂಪ್ರದಾಯವಾಗಿ ಇದೆಯೆಂದು ಹೇಳಬಹುದು. ಹಾಗೆ ಈ ದಿನ ಇಂದೂ ಸಂಪ್ರದಾಯಗಳು ಸಹ ಜ್ಞಾನವೊಂದರ ದಾರಿತಪ್ಪಿ ಮತ ಗುರುತಿಗೆ ಎನ್ನುವಂತಿವೆ. ಈ ದಿನ ನಾವು ಮತಹಿರಿಯರೆಂದು ಹೇಳಿಕೊಳ್ಳುವ ಬ್ರಾಹ್ಮಣರ ಹತ್ತಿರವೇ ಕಟ್ಟು, ಬೊಟ್ಟು, ಜುಟ್ಟು ಅರ್ಥವಿಲ್ಲದ ಆಚಾರಗಳಾಗಿ ಇವೆ. ಆದರೂ ಉಳಿದ ಕೆಲವು ಕಾರ್ಯಗಳಲ್ಲಿ ಜ್ಞಾನದಿಂದ ಕೂಡಿಕೊಂಡ

ಸಂಪ್ರದಾಯಗಳು ಕೆಡದ ಆಚಾರಗಳಾಗಿ ಇವತ್ತಿಗೂ ಇದ್ದರೂ, ಅವುಗಳ ಅರ್ಥವನ್ನು ತಿಳಿಯದ ಸ್ಥಿತಿಯಲ್ಲಿ ಹಿಂದೂಗಳಿದ್ದಾರೆ. ಅರ್ಥ ತಿಳಿಯದ ಆಚಾರಗಳು ಉಳಿದಿರುವುದಕ್ಕೆ ಸ್ವಲ್ಪಮಟ್ಟಿಗೆ ಸಂತೋಷಿಸಬಹುದು. ಏಕೆಂದರೆ! ಆಚಾರಗಳಿದ್ದರೆ ಎಂದಿಗಾದರೂ ಅವುಗಳಿಗೆ ಅರ್ಥ ತಿಳಿಯಬಲ್ಲವು. ತಿಳಿಹೇಳುವವರು ತಪ್ಪದೆಬರುತ್ತಾರೆ.

ಕ್ರೈಸ್ತರಲ್ಲಿಯೂ, ಮುಸ್ಲಿಮ್‌ರಲ್ಲಿಯೂ ಇರುವ ಆಚಾರಗಳು ಸ್ವಲ್ಪವೂ ಜ್ಞಾನಸಂಬಂಧವಾದವು ಅಲ್ಲದೆ, ಕೇವಲ ಮತ ಸಂಬಂಧವಾದವೆ ಆಗುವುದರಿಂದ, ಅವುಗಳಿಗೆ ಭವಿಷ್ಯತ್ತಿನಲ್ಲಿ ಜ್ಞಾನಸಂಬಂಧ ಅರ್ಥ ತಿಳಿಯುತ್ತದೆಂಬ ಆಸೆ ಸಹ ಅವರಿಗಿಲ್ಲ. ಮುಸ್ಲಿಮ್‌ರಲ್ಲಿ ಗಂಡಸರು ಕಟ್ಟಿಕೊಳ್ಳುವ ಲುಂಗಿಯಾಗಲಿ, ಪೈಜಾಮಾಗಾಲಿ ಹಿಮ್ಮಡಿಗಳಿಗಿಂತ ಅಥವಾ ಪಾದಗಳಿಗಿಂತ ಆರು ಅಂಗುಲಗಳು ಮೇಲಕ್ಕೆ ಇರಬೇಕು. ಅವರ ಜೀವನ ವಿಧಾನದಲ್ಲಿ ಇದು ಬಟ್ಟೆಗಳ ಶುಭ್ರತೆಗೆ ಸಂಬಂಧಿಸಿದ ವಿಧಾನವೆ ಹೊರತು ಅದರಿಂದ ಮತ್ತೆ ಯಾವ ಇತರೆ ಪ್ರಯೋಜನೆ ಇಲ್ಲ. ಅದು ಉಳಿದ ಮತದವರು ಯಾರೂ ಮಾಡದಂತೆ ಒಂದು ಮುಸ್ಲಿಮ್ ಮತದವರೆ ವಿಧಿಯಾಗಿ ಮಾಡುವುದರಿಂದ ಅದು ಮುಸ್ಲಿಮ್‌ರ ಸಂಪ್ರದಾಯ ವಾಗಿದೆ. ಮುಸ್ಲಿಮ್‌ರ ಹಿರಿಯರು ಹೇಳಿದ ಸಂಪ್ರದಾಯಗಳನ್ನು ಮುಸ್ಲಿಮ್‌ರು ವಿಧಿಯಾಗಿ ಆಚರಿಸಬೇಕು. ಹಾಗೆ ಆಚರಿಸದೆ ಹೋದರೆ ಮತ ಬಲಹೀನವಾಗುತ್ತ ದೆಂದು ಅವರ ಹಿರಿಯರು ಹೇಳುತ್ತಿರುತ್ತಾರೆ. ಅಷ್ಟೇಅಲ್ಲದೆ ಅವರ ಆಚರಣೆಯನ್ನು, ಸಂಪ್ರದಾಯಗಳನ್ನು ನೋಡಿದ ತಕ್ಷಣ ಇವರು ಮುಸ್ಲಿಮ್ ಮತದವರೆಂದು ಗುರುತಿಸುವಾಗೆ ಇರುತ್ತಾರೆ. ಹೆಚ್ಚಾಗಿ ಅವರ ಆಚರಣೆಗಳೆಲ್ಲ ಮತದಿಂದ ಮುಡಿಪಟ್ಟಿರುವುದರಿಂದ ಆ ಮತದಲ್ಲಿನವರೆಲ್ಲರೂ ಇಷ್ಟವಿದ್ದರೂ, ಇಷ್ಟವಿಲ್ಲದಿದ್ದರೂ ತಪ್ಪದೆ ಆಚರಿಸಬೇಕಾಗಿರುತ್ತದೆ. ಆಚರಿಸದೆಹೋದರೆ ಮತಹಿರಿಯರ ಕೋಪಕ್ಕೆ ಗುರಿಯಾಗಬೇಕಾಗಿ ಬರುತ್ತದೆಂದು, ಅದರಿಂದ ತಮ್ಮ ಸಮಾಜದವರಿಗೆಲ್ಲಾ ವಿರುದ್ಧವಾಗಿ ಕಾಣಿಸುತ್ತೇವೆಂದು, ಮತಾಚರಣೆಗಳು ಇಲ್ಲದಿದ್ದರೆ ಮತವು ತಮ್ಮನ್ನು ಹೊರಹಾಕುತ್ತದೆಂದು, ಭಯಪಟ್ಟ ಮುಸ್ಲಿಮ್‌ರು ತಪ್ಪದೆ ತಮ್ಮ ಸಂಪ್ರದಾಯಗಳನ್ನು ಆಚರಿಸುತ್ತಿದ್ದಾರೆ.

ಮುಸ್ಲಿಮ್‌ರು ಆಚರಿಸುವ ಆಚರಣೆಯಲ್ಲಿ ಗಡ್ಡವನ್ನು ಬೆಳೆಸುವುದು ಮೊದಲುಗೊಂಡು, ಒಡುಗು (ಸುನ್ತಿ) ಮಾಡಿಸಿಕೊಳ್ಳುವವರೆಗು ಇಷ್ಟ ಇಲ್ಲದಿದ್ದರೂ ಆಚರಿಸಬೇಕಾಗಿ ಬರುತ್ತದೆ. ಕೆಲವರು ಮುಸ್ಲಿಮ್‌ರು ತಮ್ಮ ಆಚಾರಗಳನ್ನು ಇಷ್ಟದಿಂದ ಆಚರಿಸುತ್ತಿದ್ದರೂ, ಇಷ್ಟವಿಲ್ಲದಿದ್ದರೂ ಆಚರಿಸುವವರು ಸಹ ಕೆಲವರಿರಬಹುದು. ಇಷ್ಟದಿಂದ ಕೂಡಿಕೊಂಡ ಆಚಾರಗಳಾದರೂ, ಇಷ್ಟವಿಲ್ಲದ ಆಚಾರಗಳಾದರೂ, ಒಂದು ಸಹ ಅಂತಿಮ ದೈವಗ್ರಂಥವಾದ ಖುರ್‌ಆನ್ ಗ್ರಂಥದಲ್ಲಿ ಯಾವಮಾತ್ರವೂ ಇಲ್ಲವೆಂದೇ ಹೇಳಬಹುದು. ಮುಸ್ಲಿಮ್‌ರಿಗೆ ಮತ ಗ್ರಂಥವಾಗಿ ಹೇಳಲ್ಪಡುವ ಖುರ್‌ಆನ್ ಗ್ರಂಥದಲ್ಲಿ ಮುಸ್ಲಿಮ್‌ರ ಸಂಪ್ರದಾಯಗಳು ಇಲ್ಲವೆಂದು ಮುಸ್ಲಿಮ್‌ರೆಲ್ಲರಿಗೂ ತಿಳಿಯದು. ಮುಸ್ಲಿಮ್ ಎಲ್ಲರಿಗೂ ತಿಳಿಯದಿದ್ದರೂ ಬಹಳಸ್ವಲ್ಪ ಜನರಿಗೆ ಮಾತ್ರ ಖುರ್‌ಆನ್ ಗ್ರಂಥದಲ್ಲಿ ಆಚರಣೆಗಳನ್ನು (ಸಂಪ್ರದಾಯಗಳನ್ನು) ಕುರಿತು ದೇವರು ಹೇಳಲಿಲ್ಲವೆಂದು ತಿಳಿದಿದೆ. ಆದರೆ ಅವೆಲ್ಲವೂ ಹದೀಸು ಗ್ರಂಥಗಳಲ್ಲಿ ಇವೆಯೆಂದು ಸಹ ತಿಳಿದಿದೆ. ಆದರೆ ಮುಸ್ಲಿಮ್‌ರಿಗೆ ಖುರ್‌ಆನ್‌ಗಿಂತ ಹದೀಸುಗಳೆ ಮುಖ್ಯವಾದವೆಂದು ಅವರ ಹಿರಿಯರು ಹೇಳುವುದರಿಂದ ಎಲ್ಲರೂ ಹಾಗೆಯೇ ಎಂದು ಅಂದುಕೊಂಡಿದ್ದಾರೆ. ಮುಸ್ಲಿಮ್‌ರಲ್ಲಿ ಗಂಡಸರೆಲ್ಲರಿಗೂ ಖರ್‌ಆನ್ ಗ್ರಂಥಕ್ಕಿಂತ ಹದೀಸು ಗ್ರಂಥವೆ ಮುಖ್ಯವೆಂದು, ಹಾಗೆ ಸ್ತ್ರೀಯರಿಗೆ ಹದೀಸು ಗ್ರಂಥಕ್ಕಿಂತ ಖುರ್‌ಆನ್ ಗ್ರಂಥವು ಮುಖ್ಯವೆಂದು ಹೇಳುವುದು ನಡೆದಿದೆ. ಆದ್ದರಿಂದ ತಮ್ಮ ಹಿರಿಯರು ಹೇಳಿದಂತೆ ಸ್ತ್ರೀಯರೆಲ್ಲರೂ ಖುರ್‌ಆನ್ ಗ್ರಂಥವನ್ನು ವಿಧಿಯಾಗಿ ಓದುತ್ತಿರುತ್ತಾರೆ. ಗಂಡಸರೆಲ್ಲರೂ ಮಸ್ಜಿದ್‌ಗಳಲ್ಲಿ ಬೋಧಿಸುವ ಹದೀಸು ಗ್ರಂಥ ವಾಕ್ಯಗಳನ್ನು ಕೇಳುತ್ತಿರುತ್ತಾರೆ.

ಈ ವಿಧವಾಗಿ ಮುಸ್ಲಿಮ್ ಸಮಾಜದಲ್ಲಿನ ಸಾಮಾನ್ಯ ಮುಸ್ಲಿಮರೆಲ್ಲರೂ ದೇವರು, ಮತ ಎನ್ನುವ ಭಯದಿಂದ ಕಟ್ಟುಬಿದ್ದು ಇದ್ದಾರೆ. ಮತವನ್ನು ಅತಿಕ್ರಮಿಸಿದರೆ ದೇವರಮಾತನ್ನು ಅತಿಕ್ರಮಿಸಿದಂತೆಯೆಂದು, ದೇವರಮಾತನ್ನು ಅತಿಕ್ರಮಿಸಿದರೆ ನರಕ ತಪ್ಪುವುದಿಲ್ಲವೆಂದು, ದೇವರ ಮಾತನ್ನು ಅತಿಕ್ರಮಿಸದಂತೆ

ನಡೆದುಕೊಂಡರೆ ಸ್ವರ್ಗಕ್ಕೆ ಹೋಗುತ್ತೇವೆಂದು, ಮುಸ್ಲಿಮ್ ಹಿರಿಯರು ಹೇಳುವುದರಿಂದ ಅದೇ ಸತ್ಯವೆಂದು ಕೆಲವರು ನಂಬಿರುವಾಗ, ಸ್ವರ್ಗ ಬರುವುದು ಸತ್ಯ ಅಲ್ಲವೇನೊ! ಎಂದು ಅಂದುಕೊಳ್ಳುವವರು, ನರಕ ಬರುತ್ತದೆಂಬ ಭಯದಿಂದ ತಪ್ಪದೆ ಅವರ ಹಿರಿಯರ ಮಾತುಗಳಿಗೆ ಕಟ್ಟುಬಿದ್ದು ಏನು ಹೇಳಿದರೆ ಅದು ಆಚರಿಸುತ್ತಿದ್ದಾರೆ. ಮುಸ್ಲಿಮರ ಭಯ ಮುಸ್ಲಿಮ್ ಹಿರಿಯರಿಗೆ ತಮ್ಮ ಕೈಯಲ್ಲಿ ಆಯುಧವಾಗಿರುವಾಗ, ಅದನ್ನು ತೋರಿಸಿ ಭಯವಿಡುತ್ತಾ ತಾವು ಹೇಳಿದಂತೆ ಮುಸ್ಲಿಮ್‌ರೆಲ್ಲರೂ ಮಾಡುವ ವಿಧವಾಗಿ ಮುಸ್ಲಿಮರನ್ನು ಬದಲಾಯಿಸಿಕೊಂಡಿದ್ದಾರೆ. ಆದ್ದರಿಂದ ಅವರ ಹಿರಿಯರು ಹೇಳಿದಹಾಗೆ ಖಂಡಿತ ಆಚರಿಸುವ ಕ್ರಮಶಿಕ್ಷಣ ಇರುವ ಮತ ಮುಸ್ಲಿಮ್ ಮತವೆಂದು ಹೆಸರುವಾಸಿಯಾಗಿದೆ. ಅಷ್ಟೇಅಲ್ಲದೆ "ಏಕೇಶ್ವರೋಪಾಸನ" ಎನ್ನುವ ಮಾರ್ಗದಲ್ಲಿಯೇ ನಡೆಯುವ ಏಕೈಕ ಮತವಾಗಿ ಸಹ ಮುಸ್ಲಿಮ್ ಮತ ಹೆಸರುವಾಸಿಯಾಗಿದೆ.

ಮುಸ್ಲಿಮ್ ಎಲ್ಲರಿಗೂ ನರಕದ ಮೇಲೆ ಹೇಗೆ ಭಯವಿದೆಯೊ, ದೇವರ ಮೇಲೆ ಸಹ ಹಾಗೆ ವಿಶ್ವಾಸವೂ ಇದೆ. ಮುಸ್ಲಿಮ್ ಮತದಲ್ಲಿ ಎಲ್ಲದಕ್ಕಿಂತ ಮೀರಿರುವ ಒಂದೇ ಒಂದು ಒಳ್ಳೆಯ ಲಕ್ಷಣ ಏಕೇಶ್ವರೋಪಾಸನ. ನರಕದ ಮೇಲೆ ಭಯವಿರುವಂತೆ ದೇವರ ಮೇಲೆ ಶ್ರದ್ಧೆಯೂ ಸಹ ಇದೆ. ದೇವರಮೇಲೆ ಶ್ರದ್ಧೆ ಇರುವುದನ್ನು ಅನುಸರಿಸಿ ಅವರಿಗೆ ಏಕೇಶ್ವರೋಪಾಸನದ ಮೇಲೆ ವಿಶ್ವಾಸ ಏರ್ಪಟ್ಟಿದೆಯೆಂದೇ ಹೇಳಬಹುದು. ದೇವರ ಮೇಲಿರುವ ವಿಶ್ವಾಸದಿಂದ ದೇವರಿಗೋಸ್ಕರ ಎಂತಹ ಶ್ರಮವಾದರೂ ಬೀಳುವುದಕ್ಕೆ ಮುಸ್ಲಿಮ್‌ರು ಸಿದ್ಧವಾಗಿದ್ದಾರೆಂದು ಒಪ್ಪಿಕೊಳ್ಳದೆ ತಪ್ಪುವುದಿಲ್ಲ. ಅಂತಹದರಲ್ಲಿ ದೇವರ ಜ್ಞಾನವನ್ನು ಎಷ್ಟುಕಷ್ಟಪಟ್ಟಾದರೂ ತಿಳಿದುಕೊಂಡು ಅದರ ಮೂಲಕ ದೇವರ ಹತ್ತಿರಕ್ಕೆ ಸೇರಬೇಕೆಂಬ ಒಳ್ಳೆಯ ಉದ್ದೇಶ ಮುಸ್ಲಿಮರದೆಂದು ಹೇಳಬಹುದು. ಆದರೆ ಅವರು ಅಂದುಕೊಂಡ ಉದ್ದೇಶ ಒಂದು ವಿಧವಾಗಿ ನೇರವೇರಲಿಲ್ಲ. ಮುಸ್ಲಿಮರಲ್ಲಿರುವ ಚಲವನ್ನು ಮುಸ್ಲಿಮ್ ಹಿರಿಯರು ಮತದ ಕಡೆ ವಿನಿಯೋಗಿಸುವುದರಿಂದ, ಅದೇ ಜ್ಞಾನಮಾರ್ಗವೆಂದು ಉಳಿದ ಮುಸ್ಲಿಮ್

ಎಲ್ಲರೂ ತಿಳಿಯುವುದರಿಂದ, ದೇವರಮೇಲೆ ತೋರಿಸಬೇಕಾದ ಶ್ರದ್ಧೆಯನ್ನು ಮತದ ಮೇಲೆ ತೋರಿಸುವುದರಿಂದ ಬಹಳ ತಪ್ಪು ನಡೆದುಹೋಗಿದೆಯೆಂದು ಹೇಳಬಹುದು. ಅದರ ಕಾರಣವಾಗಿ ಮುಸ್ಲಿಮ್‌ರಿಗೆ ಮತ ತಿಳಿದಷ್ಟು ದೇವರಾಗಲಿ, ದೇವರ ಜ್ಞಾನವಾಗಲಿ ತಿಳಿಯಲಿಲ್ಲ.

**ಖುರ್‌ಆನ್ ಗ್ರಂಥದಲ್ಲಿ 30 ಪಾರಾಗಳಲ್ಲಿ 114 ಸೂರಾಗಳು ಇವೆ. 114 ಸೂರಾಗಳಲ್ಲಿ 6236 ಆಯತ್‌ಗಳು (ವಾಕ್ಯಗಳು) ಇವೆ. 6236 ಆಯತ್‌ಗಳಲ್ಲಿ ಕನಿಷ್ಟ 236 ವಾಕ್ಯಗಳನ್ನು ಅರ್ಥ ಮಾಡಿಕೊಂಡರೂ ಖುರ್‌ಆನ್‌ನಲ್ಲಿನ ದೈವಜ್ಞಾನ ಪೂರ್ತಿ ಅರ್ಥವಾಗುತ್ತದೆ.** ಖುರ್‌ಆನ್ ಗ್ರಂಥದಲ್ಲಿನ ಜ್ಞಾನವನ್ನು ಖಗೋಳದಲ್ಲಿ ಗ್ರಹವಾಗಿರುವ ಜಿಬ್ರಯೇಲ್ ಎಂಬ ಮಹಾಜ್ಞಾನಿ ಮುಹಮ್ಮದ್ ಪ್ರವಕ್ತರಿಗೆ ಹೇಳಿದ್ದಾನೆ. ಜಿಬ್ರಯೇಲ್ ಹೇಳಿದ ಜ್ಞಾನ ಸೃಷ್ಠಿ ಆದಿಯಲ್ಲಿ ದೇವರು ಹೇಳಿದ ಜ್ಞಾನವೆಂದು ತಿಳಿಯುತ್ತಿದೆ. ಆದ್ದರಿಂದ ಜಿಬ್ರಯೇಲ್ ಹೇಳಿದ ಜ್ಞಾನ ಸ್ವಚ್ಚವಾದ ದೈವಜ್ಞಾನವೆಂದು ತಿಳಿಯುತ್ತದೆ. ಜಿಬ್ರಯೇಲ್ ಆಗಿನ ಕಾಲದಲ್ಲಿ ಮನುಷ್ಯರಲ್ಲಿ ಉತ್ತಮನಾದ ಮುಹಮ್ಮದ್ ಪ್ರವಕ್ತರನ್ನು ಆಯ್ಕೆ ಮಾಡಿಕೊಂಡು ಪ್ರವಕ್ತರಿಗೆ ಜ್ಞಾನವನ್ನು ಹೇಳುವುದು ನಡೆದಿದೆ. ಪ್ರವಕ್ತರು ಓದುಬಾರದವರಾದ್ದರಿಂದ ಕೇಳಿದ ಜ್ಞಾನವನ್ನು ಇತರರಿಗೆ ಹೇಳುತ್ತಿದ್ದನು. ಆ ವಿಧವಾಗಿ 23 ವರ್ಷಗಳು ಕೊನಸಾಗಿತು. 23 ವರ್ಷಗಳು ಜಿಬ್ರಯೇಲ್ ಮೂಲಕ ಕೇಳಿದ ಜ್ಞಾನವನ್ನು **“ಖುರ್‌ಆನ್”** ಎಂಬ ಹೆಸರಿನಿಂದ ಇತರರ ಮೂಲಕ ಬರೆಸಿದ್ದಾನೆ. 23 ವರ್ಷಗಳಿಂದ ಕೇಳಿದ ಜ್ಞಾನವನ್ನು ಯಾರಿಗೆ ಜ್ಞಾಪಕ ಇರುವುದು ಅವರು ಬರೆಯುವುದು ನಡೆದಿದೆ. ಈ ವಿಧವಾಗಿ ಒಬ್ಬ ಮುಹಮ್ಮದ್ ಪ್ರವಕ್ತರಿಂದಲೆ ಅಲ್ಲದೆ, ಇತರರ ಮೂಲಕವೂ ಸಹ ಶೇಕರಿಸಲ್ಪಟ್ಟ ವಾಕ್ಯಗಳನ್ನು ಗ್ರಂಥದೊಳಗೆ ಆ ದಿನದ ಭಕ್ತರು ಬರೆಯುವುದು ನಡೆದಿದೆ. ಆ ದಿನ ಮುಹಮ್ಮದ್ ಪ್ರವಕ್ತರು ನಿರಕ್ಷರಾಸ್ಯನು ಆಗಿರುವುದರಿಂದ ಕೆಲವರು ಸೇರಿ ಖುರ್‌ಆನ್ ಗ್ರಂಥವನ್ನು ಬರೆಯುವುದು ನಡೆದಿದೆ. ಆದಿನ ಪ್ರವಕ್ತರು ಹೇಳಿದ ಜ್ಞಾನವನ್ನು ಎಷ್ಟೋ ಜನ ಕೇಳಿ ದವರಿರುವುದರಿಂದ ಅವರಿಗೆ ಜ್ಞಾಪಕವಿರುವವು, ಅರ್ಥವಾಗಿರುವವು ಅವರು

ಬರೆದಾಗ, ಪ್ರವಕ್ತರು ಮಾತ್ರ ತನಗೆ ಜ್ಞಾಪಕ ಇರುವವು ತಾನು ಹೇಳಿ ಬರೆಸಿದ್ದಾನೆ. **ಈ ದಿನ ಖುರ್‌ಆನ್‌ನಲ್ಲಿನ 6236 ವಾಕ್ಯಗಳಿರುವಾಗ 6000 ವಾಕ್ಯಗಳನ್ನು ಇತರರು ಬರೆದಿದ್ದರೂ ಪ್ರವಕ್ತರು 236 ವಾಕ್ಯಗಳಾದ ಸ್ವತಃವಾಗಿ ಬರೆಸಿರುತ್ತಾರೆ.** ಖುರ್‌ಆನ್‌ನಲ್ಲಿನ ಎಲ್ಲಾ ವಾಕ್ಯಗಳನ್ನು 23 ವರ್ಷಗಳಲ್ಲಿ ಪ್ರವಕ್ತರು ಹೇಳಿರುವಾಗ, ಅವುಗಳನ್ನೆ ಇತರರು ಖುರ್‌ಆನ್ ಗ್ರಂಥದಲ್ಲಿ ಬರೆದಾಗ, ಹಾಗೆ ಬರೆಯುವಾಗ ಇನ್ನೂರಕ್ಕೆ ಮೇಲೆ ವಾಕ್ಯಗಳನ್ನು ಪ್ರವಕ್ತರು ಸ್ವತಃವಾಗಿ ಆಗ ಹೇಳಿ ಬರೆಸಿದ್ದಾನೆಂದು ನಂಬುತ್ತಿದ್ದೇವೆ. ಏಕೆಂದರೆ! ಖುರ್‌ಆನ್ ಗ್ರಂಥದಲ್ಲಿನ 6236 ವಾಕ್ಯಗಳಲ್ಲಿ ಅತ್ಯಂತ ಉತ್ತಮವಾದವು, ಅತಿ ರಹಸ್ಯವಾದವು ಇನ್ನೂರಕ್ಕೆ ಮೇಲೆ ಇವೆ. ಅಷ್ಟು ದೊಡ್ಡ ವಾಕ್ಯಗಳನ್ನು ತಿರುಗಿ ಎರಡನೆ ಬಾರಿ ಪ್ರವಕ್ತರು ಹೇಳಿರುತ್ತಾರೆಂದು, ಅಷ್ಟು ದೊಡ್ಡ ವಾಕ್ಯಗಳನ್ನು ಇತರರು ಹೇಳಿರುವುದಿಲ್ಲವೆಂದು ಅಂದುಕೊಳ್ಳುತ್ತಿದ್ದೇವೆ.

ರಹಸ್ಯಗಳಿಗೆಲ್ಲಾ ರಹಸ್ಯಗಳಾದ ಆ ವಾಕ್ಯಗಳನ್ನು ಪ್ರವಕ್ತರು ಹೊರತು ಇತರರು ಹೇಳುವುದಕ್ಕೆ ಅವಕಾಶವಿಲ್ಲವೆಂದು ತಿಳಿಯುತ್ತದೆ. ಆದರೇ ಈ ದಿನ ಮುಸ್ಲಿಮ್‌ರಿಗೆ ಖುರ್‌ಆನ್ ಗ್ರಂಥ ಎಷ್ಟರಮಟ್ಟಿಗೆ ಅರ್ಥವಾಗಿದೆಯೊ ಏನೊ, ಪೂರ್ತಿ ಅರ್ಥ ಆಗಲಿಲ್ಲವೆಂದು ಮಾತ್ರ ಹೇಳಬಹುದು. ಸಾಮಾನ್ಯ ಮುಸ್ಲಿಮ್‌ರು ಖುರ್‌ಆನ್ ಗ್ರಂಥವನ್ನು ಓದುವುದಿಲ್ಲ. ಮುಸ್ಲಿಮ್ ಸ್ತ್ರೀಯರೆ ಹೆಚ್ಚಾಗಿ ಖುರ್‌ಆನ್ ಗ್ರಂಥವನ್ನು ಓದುತ್ತಿದ್ದಾರೆ. ಆದರೆ ಖುರ್‌ಆನ್ ಗ್ರಂಥವನ್ನು ಅರಬ್ಬಿ ಭಾಷೆಯಲ್ಲಿಯೆ ಓದಬೇಕೆಂಬ ನಿಯಮ ಇರುವುದರಿಂದ, ಅರಬ್ಬಿಭಾಷೆ ಎಲ್ಲರಿಗೂ ತಿಳಿಯದಿರುವುದರಿಂದ, ಖುರ್‌ಆನ್ ಗ್ರಂಥ ಎಲ್ಲರಿಗೂ ಅರ್ಥವಾಗಲಿಲ್ಲವೆಂದೇ ಹೇಳಬಹುದು. ಈ ದಿನ ಖುರ್‌ಆನ್ ಗ್ರಂಥ ಕನ್ನಡ ಭಾಷೆಯೊಳಗೆ, ಮತ್ತೆ ಇತರೆ ಭಾಷೆಗಳೊಳಗೆ ಅನುವಾದಿಸಲ್ಪಟ್ಟರು ಮುಸ್ಲಿಮ್‌ರು ಮಾತ್ರ ಉಳಿದ ಭಾಷೆಗಳಲ್ಲಿ ಓದಬಾರದು, ಅರಬ್ಬಿ ಭಾಷೆಯಲ್ಲಿಯೇ ಓದಬೇಕೆಂದು ಅವರ ಹಿರಿಯರು ಹೇಳುವುದರಿಂದ, ಅರಬ್‌ದೇಶದಲ್ಲಿಯೆ ಅರಬ್ಬಿ ಭಾಷೆ ಬಂದವರಿಗೆ ಹೊರತು ಉಳಿದ ದೇಶಗಳಲ್ಲಿನ ಮುಸ್ಲಿಮ್‌ರಿಗೆ ಖುರ್‌ಆನ್ ಗ್ರಂಥ ಅರ್ಥವಾಗಿಲ್ಲವೆಂದೇ ಹೇಳಬಹುದು. ಮುಸ್ಲಿಮ್‌ರೆಲ್ಲರೂ ಖುರಾನ್ ಓದಲಿಲ್ಲ ಆದ್ದರಿಂದ ಓದದವರಿಗೆ ಏನೂ ತಿಳಿಯದು.

ಆದರೆ ಖುರ್‌ಆನ್ ಓದಿದವರಿಗೆ ಅರಬ್ಬೀ ಭಾಷೆ ಬರುವುದಿಲ್ಲ ಆದ್ದರಿಂದ, ಅವರಿಗೂ ಸಹ ತಿಳಿಯದೆಂದೇ ಹೇಳಬಹುದು. ಇನ್ನು ಅರಬ್ಬೀ ಭಾಷೆಯನ್ನು ಕಲೆತುಕೊಂಡವರು ಮತ ಹಿರಿಯರಾಗಿ ಇರುವುದರಿಂದ ಅವರು ತಪ್ಪದೇ ಖುರ್‌ಆನ್ ಗ್ರಂಥವನ್ನು ಓದಿರುತ್ತಾರೆ. ಆದರೆ ಭಾಷೆ ಬಂದು ಓದಿದಷ್ಟು ಮಾತ್ರಕ್ಕೆ ಅವರಿಗೆ ಖುರ್‌ಆನ್ ಗ್ರಂಥ ಅರ್ಥವಾಗಿರುತ್ತದೆಂದು ಹೇಳಲಾರೆವು. ಏಕೆಂದರೆ! ಗ್ರಂಥದಲ್ಲಿನ ಆರು ಸಾವಿರ ವಾಕ್ಯಗಳು ಅರ್ಥವಾದರೂ ಪ್ರವಕ್ತರವರು ಸ್ವತಃವಾಗಿ ಹೇಳಿ ಬರೆಸಿರುವ 236 ವಾಕ್ಯಗಳು ಅರ್ಥವಾಗಿರುತ್ತವೆಂದು ಹೇಳಲಾರೆವು. ಖುರ್‌ಆನ್ ಗ್ರಂಥದಲ್ಲಿ ಆಧ್ಯಾತ್ಮಿಕ ರಹಸ್ಯವೆಲ್ಲವೂ ಎರಡು ಮೂರು ನೂರು ವಾಕ್ಯಗಳಲ್ಲಿ ಇರುವುದರಿಂದ, ಆ ವಾಕ್ಯಗಳು ಪೂರ್ತಿ ಅರ್ಥವಾಗಿಲ್ಲವೆಂದು ಹೇಳಬಹುದು.

ಈಗ ಕೆಲವರಿಗೆ ಒಂದು ಪ್ರಶ್ನೆಬಂದು ಕೇಳಬಹುದು. ಅದೇನೆಂದರೆ! ಈ ದಿನ ಮುಸ್ಲಿಮ್ ಹಿರಿಯರಲ್ಲಿ ಎಷ್ಟೋ ಜನ ಪಂಡಿತರು, ಜ್ಞಾನಿಗಳಿರುವಾಗ, ಅವರಿಗೂ ಸಹ ಅರ್ಥವಾಗಲಿಲ್ಲವೆಂದು ನೀವು ಹೇಗೆ ಹೇಳಬಲ್ಲಿರೆಂದು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಸಮಾಧಾನ ಏನೆಂದರೆ! ಮುಸ್ಲಿಮ್‌ರಲ್ಲಿ ಎಷ್ಟೋ ಜನ ಮೇಧಾವಿಗಳು ಇರುವುದು ನಾನು ಕೂಡ ನೋಡಿದ್ದೇನೆ. ಅವರ ಮೇಧಾಶಕ್ತಿಯನ್ನು ನೋಡಿ ನಾನು ಸ್ವತಃವಾಗಿ ಆಶ್ಚರ್ಯಪಟ್ಟ ಸಂದರ್ಭಗಳು ಸಹ ಇವೆ. ಅವರಿಗೆ ಎಷ್ಟೋ ಜ್ಞಾಪಕಶಕ್ತಿ ಇದ್ದರೂ ಜ್ಞಾನಶಕ್ತಿ ಇಲ್ಲವೆಂದು ನನಗೆ ಬಹಳ ಸಲ ಅರ್ಥವಾಗಿದೆ. ಅವರ ಮೇಧಾ ಶಕ್ತಿ ಎಲ್ಲವನ್ನು ಸ್ಥೂಲ ವಿಷಯಗಳ ಮೇಲೆ ಮಾತ್ರವೆ ತೋರಿಸುತ್ತಿದ್ದಾರೆ. ಸೂಕ್ಷ್ಮ ವಿಷಯಗಳನ್ನು ಬಿಟ್ಟುಹಾಕುತ್ತಿದ್ದಾರೆ. ದೇವರ ವಿಷಯವೆಲ್ಲಾ ಸೂಕ್ಷ್ಮ ವಿಷಯದ ಮೇಲೆ ಆಧಾರಪಟ್ಟಿದೆ. ದೇವರು ಸ್ಥೂಲವಾದವನು ಅಲ್ಲ. ಆತನು ಕಣ್ಣಿಗೆ ಕಾಣಿಸುವುದಿಲ್ಲ. ಅಂತಹ ದೇವರನ್ನು ಸ್ಥೂಲ ದೃಷ್ಟಿಯಿಂದ ನೋಡಿದರೆ ಹೇಗೆ ತಿಳಿಯುತ್ತಾನೆ? ಮೇಧಾವಿಗಳೆಲ್ಲರೂ ಸೂಕ್ಷ್ಮವನ್ನು ಬಿಟ್ಟು ಸ್ಥೂಲವಾಗಿ ನೋಡುವುದರಿಂದ, ಅವರಿಗೆ ದೇವರ ವಿಷಯ ಅರ್ಥವಾಗಲಿಲ್ಲವೆಂದು ಹೇಳಬಹುದು. **ಖುರ್‌ಆನ್**

**ಗ್ರಂಥದಲ್ಲಿ ಮೂರನೆ (3) ಸೂರಾದಲ್ಲಿ ಏಳನೆ (7) ಆಯತ್‌ನಲ್ಲಿ ಸ್ಥೂಲ, ಸೂಕ್ಷ್ಮ ವಿಷಯಗಳನ್ನು ಕುರಿತು ಜಿಬ್ರಯೇಲ್ ಹೇಳುವುದು ನಡೆದಿದೆ.** ದೇವರು ಸೂಕ್ಷ್ಮವಾದವನು ಆದ್ದರಿಂದ ದೇವರ ಜ್ಞಾನ ಬಹಳ ಭಾಗ ಸೂಕ್ಷ್ಮ ಜ್ಞಾನದಿಂದ ಕೂಡಿಕೊಂಡಿರುತ್ತದೆ. ಒಂದು ಲೆಕ್ಕದ ಪ್ರಕಾರ 40 ರಷ್ಟು ಸ್ಥೂಲಜ್ಞಾನ, 60 ರಷ್ಟು ಸೂಕ್ಷ್ಮ ಜ್ಞಾನ ದೈವಗ್ರಂಥಗಳಲ್ಲಿ ಇದೆಯೆಂದು ತಿಳಿಯುತ್ತದೆ. ಮತ್ತೊಂದು ಲೆಕ್ಕದ ಪ್ರಕಾರ 25 ರಷ್ಟು ಸ್ಥೂಲ, 75 ರಷ್ಟು ಸೂಕ್ಷ್ಮದಿಂದ ದೇವರ ಜ್ಞಾನವಿದೆಯೆಂದು ತಿಳಿಯುತ್ತಿದೆ. ಕಡಿಮೆಯದು ತೆಗೆದುಕೊಂಡರೂ 60 ರಷ್ಟು ಸೂಕ್ಷ್ಮ ಇರುವಾಗ ಮುಸ್ಲಿಮ್ ಮೇಧಾವಿಗಳೆಲ್ಲರೂ ದೇವರ ವಿಷಯವನ್ನು ಮೊತ್ತವು ಸ್ಥೂಲವಾಗಿ ನೋಡುತ್ತಿದ್ದಾರೆ. ಆದ್ದರಿಂದ ಅವರಿಗೆ ಎಷ್ಟು ಮೇಧಾಶಕ್ತಿ ಇದ್ದರೂ ದೇವರ ಜ್ಞಾನ ಅರ್ಥ ಆಗುವುದಿಲ್ಲವೆಂದು ಹೇಳುತ್ತಿದ್ದೇವೆ.

ಖುರ್‌ಆನ್ ಗ್ರಂಥದಲ್ಲಿ **"ಆಲಿ ಇಮ್ರಾನ್" ಎಂಬ ಮೂರನೆ (3) ಸೂರಾದಲ್ಲಿ ಏಳನೆ (7) ಆಯತ್‌ನಲ್ಲಿ** ಸ್ಥೂಲ, ಸೂಕ್ಷ್ಮಗಳನ್ನು ಕುರಿತು ಹೇಳಿರುವಾಗ, ಮುಸ್ಲಿಮ್ ಹಿರಿಯರು ಸೂಕ್ಷ್ಮವಾಗಿ ನೋಡಬಾರದೆಂದು ಬರೆದುಕೊಂಡಿದ್ದಾರೆ. ಅಲ್ಲಿನ ವಾಕ್ಯಗಳಲ್ಲಿ **"ಸೂಕ್ಷ್ಮವಾಗಿ ನೋಡುವುದು ಮೂರ್ಖರಿಗೆ ತಿಳಿಯದು, ಆದ್ದರಿಂದ ಅವರು ಹೇಳಿದ ಮಾತುಗಳನ್ನು ನಂಬಬೇಡಿರಿ"** ಎಂದು ಹೇಳಿರುವಾಗ ಸೂಕ್ಷ್ಮವಾಗಿ ನೋಡುವ ಯಾರ ಮಾತುಗಳನ್ನೂ ನಂಬಬೇಡಿರೆಂದು ಮುಸ್ಲಿಮ್‌ರು ಅರ್ಥ ಮಾಡಿಕೊಳ್ಳುವುದರಿಂದ, ಎಲ್ಲರೂ ಸೂಕ್ಷ್ಮವಾಗಿ ನೋಡುವುದೆ ಬಿಟ್ಟಿದ್ದಾರೆ. ಅಲ್ಲಿನ ವಾಕ್ಯವನ್ನು ಅರ್ಥ ಮಾಡಿಕೊಳ್ಳುವುದರಿಂದ, ದೈವಗ್ರಂಥಗಳಲ್ಲಿನ ಸೂಕ್ಷ್ಮ ಅರ್ಥದಿಂದ ಕೂಡಿಕೊಂಡ ಬಹಳ ವಾಕ್ಯಗಳು ಮುಸ್ಲಿಮ್‌ರಿಗೆ ಅರ್ಥ ಆಗಲಿಲ್ಲವೆಂದೇ ಹೇಳಬಹುದು. ಎಷ್ಟು ದೊಡ್ಡ ಮೇಧಾವಿಯಾದರೂ ಚೌಟನ್ನು ತಿರುವಿಹಾಕಿ ಪಾತ್ರೆಯಲ್ಲಿನ ಸಾರನ್ನು ತೆಗೆಯಬಲ್ಲನಾ? ಹಾಗೆಯೇ ಸೂಕ್ಷ್ಮವಾದ ವಿಷಯವನ್ನು ಸ್ಥೂಲವಾಗಿ ತಿಳಿಯಬಲ್ಲನಾ? ತಿರುಗಿಸಿದ ಚೌಟಿನಿಂದ ಪಾತ್ರೆಯಲ್ಲಿನ ಸಾರನ್ನು ತೆಗೆಯದ ಹಾಗೆ, ಸ್ಥೂಲ ಭಾವದಿಂದ ದೈವಗ್ರಂಥದಲ್ಲಿನ ಜ್ಞಾನವನ್ನು ಗ್ರಹಿಸಲಾರೆವು. ಆದ್ದರಿಂದಲೇ ನಾವು ಮುಸ್ಲಿಮ್‌ರಿಗೆ ಖುರ್‌ಆನ್ ಗ್ರಂಥದಲ್ಲಿನ

ರಹಸ್ಯ ವಿಷಯಗಳು ತಿಳಿದಿಲ್ಲವೆಂದು ಹೇಳಿದ್ದೇವೆ. ಆದರೂ ಗ್ರಂಥವನ್ನು ಓದಿದ ಯಾವ ಮುಸ್ಲಿಮಾಗಲಿ ನನಗೆ ಇದರಲ್ಲಿನ ಜ್ಞಾನ ತಿಳಿಯಲಿಲ್ಲ ಎಂದು ಅಂದುಕೊಳ್ಳುವುದಿಲ್ಲ. ಓದಿದ ಪ್ರತಿಯೊಬ್ಬನು ನನಗೆ ಗ್ರಂಥದಿಂದ ಜ್ಞಾನ ಚೆನ್ನಾಗಿ ಅರ್ಥವಾಗಿದೆಂದು ಅಂದುಕೊಳ್ಳುವುದು ನಡೆಯುತ್ತದೆ. ಹಾಗೆ ಅಂದು ಕೊಳ್ಳುವುದರಿಂದ ಅವರಿಗೆ ತಿಳಿದ ಜ್ಞಾನವನ್ನೆ ಇತರ ಮುಸ್ಲಿಮ್‌ರಿಗೆ ಹೇಳುವುದು ನಡೆದಿದೆ. ಹಾಗೆ ಹೇಳುವುದರಿಂದ ಗ್ರಂಥದಿಂದ ಮೊದಲನೆಯವನಿಗೆ ಏನು ಅರ್ಥವಾಗಿದೆಯೊ, ಅದೇ ಕೇಳಿದವನಿಗೂ ಸಹ ಅರ್ಥ ಆಗಿದೆಯೆಂದು ಹೇಳಬಹುದು. ಈ ವಿಧವಾಗಿ ಎಲ್ಲರಲ್ಲಿಯೂ ಸ್ಥೂಲ ಭಾವಗಳು ಬರುವುದರಿಂದ ಸೂಕ್ಷ್ಮವಾದ ದೇವರು, ದೇವರ ಜ್ಞಾನ ಅರ್ಥವಾಗದಂತೆ ಹೋಗಿವೆ.

ಖುರ್‌ಆನ್ ಗ್ರಂಥದಲ್ಲಿ 6236 ಆಯತ್‌ಗಳಲ್ಲಿ ಅತಿ ಮುಖ್ಯವಾದವು 236 ರಿಂದ 300 ರವರೆಗು ಇರಬಹುದು. ಆದರೆ ಮುಹಮ್ಮದ್ ಪ್ರವಕ್ತರು ಸ್ವತಃವಾಗಿ ಬರೆಸಿದ ಮುಖ್ಯವಾದ ವಾಕ್ಯಗಳು ಪೂರ್ತಿ ಸೂಕ್ಷ್ಮಭಾವದಿಂದ ಕೂಡಿಕೊಂಡಿವೆ. ಅಂತಹ ಸೂಕ್ಷ್ಮಭಾವ ವಾಕ್ಯಗಳನ್ನು ಸೂಕ್ಷ್ಮವಾಗಿಯೇ ಅರ್ಥ ಮಾಡಿಕೊಳ್ಳದೆಹೋಗಿರುವುದರಿಂದ ಸ್ಥೂಲವಾಗಿ ನೋಡುವುದರಿಂದ ಮುಖ್ಯವಾಗಿ ಖುರ್‌ಆನ್‌ನಲ್ಲಿ ಸಾರಾಂಶವೆ ತಿಳಿಯದಂತೆ ಹೋಗಿದೆಯೆಂದು ಹೇಳಬಹುದು. ಹಾಗೆ ಪೂರ್ತಿ ಬೇರೆ ಭಾವನೆಯಲ್ಲಿ ಅರ್ಥವಾದ ಜ್ಞಾನದಿಂದ ಮುಖ್ಯವಾದ ಮತ ಹಿರಿಯರೆ ಇರುವಾಗ, ಅವರನ್ನು ಅನುಸರಿಸುತ್ತಾ, ಅವರ ಮಾತುಗಳನ್ನೆ ಕೇಳುವವರಿಗೆಲ್ಲ ತಪ್ಪು ಭಾವವಿರುವ ಜ್ಞಾನವೆ ಅರ್ಥವಾಗುತ್ತಿದೆ. ಹಾಗೆ ತಪ್ಪು ಭಾವದಿಂದ ದೈವಜ್ಞಾನ ಅರ್ಥ ಮಾಡಿಕೊಂಡವರು ಏನು ತಿಳಿಯದ ಮುಸ್ಲಿಮ್‌ರಿಗೆ **"ನರಕ"** ಎಂಬ ಭಯವನ್ನು ತೋರಿಸಿ, ಅವರಮಾತನ್ನು ಕೇಳುವಂತೆ ಮಾಡಿಕೊಂಡಿದ್ದಾರೆ. ಹದೀಸು ಗ್ರಂಥದಲ್ಲಿನ ನಿಯಮಗಳನ್ನು ಉಳಿದ ಮುಸ್ಲಿಮ್‌ರ ಮೇಲೆ ಪ್ರಭಾವ ಬೀರುವಂತೆ ಮಾಡಿ, ಅವುಗಳ ಪ್ರಕಾರ ನಡೆಯುವಂತೆ ಮಾಡುತ್ತಿದ್ದಾರೆ. ದೈವಜ್ಞಾನವನ್ನು ಪಕಕ್ಕಿಟ್ಟು ಹದೀಸು ವಾಕ್ಯಗಳನ್ನೆ ದೈವಜ್ಞಾನಕ್ಕೆ ಸಮಾನವಾಗಿ ಭಾವಿಸಿಕೊಂಡಿದ್ದಾರೆ. ಭಯ, ಭಕ್ತಿ ಎನ್ನುವ ಎರಡು ವಿಧಾನಗಳಲ್ಲಿ

ಮೊದಲು ಭಕ್ತಿ ನಂತರ ಭಯವಿರಬೇಕು. ಹಾಗಲ್ಲದೆ ಮೊದಲು ಭಯ ನಂತರ ಭಕ್ತಿ ಇರಬಾರದು. ಪ್ರಸ್ತುತ ಕಾಲದಲ್ಲಿ ಮುಸ್ಲಿಮ್‌ರಲ್ಲಿ ಮೊದಲು ಭಯ ನಂತರ ಭಕ್ತಿ ಇದೆ.

ಮನುಷ್ಯನನ್ನು ಹೆದರಿಸಿ ಅವನ ಮುಖಾಂತರ ಯಾವ ಕೆಲಸವಾದರೂ ಮಾಡಿಸಿಕೊಳ್ಳಬಹುದು. ಭಯ ಎನ್ನುವುದು ಯಾವ ಕೆಲಸವನ್ನಾದರೂ ಮಾಡಿಸುತ್ತದೆ. ಭಯದಿಂದ ಮನುಷ್ಯ ಯಾವ ಕೆಲಸವಾದರೂ ಮಾಡುತ್ತಾನೆ. ಮೊದಲು ಭಯವಿದ್ದು ನಂತರ ಭಕ್ತಿಯಿದ್ದರೆ ಅದು ಸರಿಯಾದ ಮಾರ್ಗ ಅಲ್ಲವೆಂದಿದ್ದೇವೆ ಅಲ್ಲವೆ! ಆದ್ದರಿಂದ ಮೊದಲು ಭಕ್ತಿಯಿದ್ದು ನಂತರ ಭಯವಿರಬೇಕು. ದೇವರ ವಿಷಯದಲ್ಲಿ ಭಕ್ತಿ, ಭಯ ಇರಬೇಕು. ಆದರೆ ಮುಸ್ಲಿಮ್‌ರಲ್ಲಿ ಮೊದಲು ಭಯ ನಂತರ ಭಕ್ತಿಯಿದೆ. ಹಾಗೆ ಇರುವುದು ಪ್ರಪಂಚ ಸಂಬಂಧವಾಗುತ್ತದೆ. ಒಬ್ಬನನ್ನು ನೋಡಿ ಮತ್ತೊಬ್ಬನು ಹೆದರಿದರೆ, ಹೆದರಿದವನಿಗೆ ಹೆದರಿಸಿದವನ ಮೇಲೆ ಭಕ್ತಿ ಏರ್ಪಡುತ್ತದೆ. ಅದು ವಿಧಿಯಿಲ್ಲದ ಬಲವಂತದ ಭಕ್ತಿಯಾಗುತ್ತದೆ. ಆದರೆ ದೇವರ ವಿಧಾನದಲ್ಲಿ ಅಂತಹ ನಿರ್ಬಂಧದ ಭಕ್ತಿ ಇರಬಾರದು. ಸ್ವಚ್ಛಂದ ಭಕ್ತಿ ಇದ್ದಾಗ ನಂತರ ತಾನು ಸಕ್ರಮವಾಗಿ ಇಲ್ಲವೇನೊ ಎಂಬ ಭಯದಿಂದ ಎಂತಹ ತಪ್ಪುಗಳು ಮಾಡದಂತೆ ನಡೆದುಕೊಳ್ಳುತ್ತಾನೆ. ಆದ್ದರಿಂದ ಭಕ್ತಿಯಿಂದ ಪ್ರಾರ್ಥನಾಮಂದಿರಕ್ಕೆ ಹೋದಾಗ ಮನುಷ್ಯ ದೇವರಿಗೆ ನಮಸ್ಕಾರ ಮಾಡುತ್ತಿದ್ದಾನೆ. ಅದನ್ನೆ ಸ್ವಚ್ಛಂಧಭಕ್ತಿ ಎಂದು ಕರೆಯುತ್ತಿದ್ದೇವೆ. ಹಾಗಲ್ಲದೆ ಭಯದಿಂದ ಪ್ರಾರ್ಥನಾ ಮಂದಿರಗಳಿಗೆ ಹೋಗಿ ದೇವರನ್ನು ನಮಸ್ಕರಿಸುವುದು ನಿರ್ಭಂಧ ಭಕ್ತಿ ಎನ್ನುತ್ತೇವೆ. ಪ್ರಸ್ತುತ ಕಾಲದಲ್ಲಿ ಮುಸ್ಲಿಮ್‌ರಲ್ಲಿ ಭಯದಿಂದ ಕೂಡಿಕೊಂಡ ಭಕ್ತಿಯಿದೆಯಾಗಲಿ, ಭಕ್ತಿಯಿಂದಕೂಡಿಕೊಂಡ ಭಯವಿಲ್ಲ. ಉದಾಹರಣೆಗೆ ಅರಬ್ಬಿ ಭಾಷೆಯಲ್ಲಿನ ಖುರ್‌ಆನ್‌ನನ್ನು ಓದುತ್ತಿರುವ ಒಬ್ಬ ಮುಸ್ಲಿಮ್‌ನನ್ನು ನೋಡಿದಾಗ ನಾವು ಆತನ ಜೊತೆ ಮಾತನಾಡುವುದು ನಡೆದಿದೆ. ಯುಕ್ತವಯಸ್ಸಿನಲ್ಲಿರುವ ಆ ಮುಸ್ಲಿಮ್ ಯುವಕನ ಜೊತೆ ಸ್ವಲ್ಪಸಮಯ ಮಾತನಾಡಿದ ನಂತರ ಆತನಲ್ಲಿರುವುದು ಭಕ್ತಿ ಅಲ್ಲ ಭಯ ಎಂದು ತಿಳಿದಿದೆ. ನಮ್ಮ ಸಂಭಾಷಣೆಯನ್ನು ಕೆಳಗೆ ನೋಡಬಹುದು.

**ನಾನು:–** ನಾನು ನಿನ್ನನ್ನು ಬಹಳ ದಿನಗಳಿಂದ ನೋಡುತ್ತಿದ್ದೇನೆ. ನೀನು ಶ್ರದ್ಧೆಯಿಂದ ಗ್ರಂಥವನ್ನು ಓದುತ್ತಿರುವಂತಿದೆ. ಅಷ್ಟು ಶ್ರದ್ಧೆಯಿಂದ ಯಾವ ಗ್ರಂಥವನ್ನು ಓದುತ್ತಿದ್ದೀಯಾ?

**ಆತನು :–** ನಾನು ಅಂತಿಮದೈವಗ್ರಂಥವಾದ ಖುರ್ಆನ್ ಗ್ರಂಥವನ್ನು ಓದುತ್ತಿದ್ದೇನೆ.

**ನಾನು :–** ಆ ಗ್ರಂಥವನ್ನು ನಾನು ನೋಡಬಹುದಾ?

**ಆತನು :–** ಈ ಗ್ರಂಥವನ್ನು ನೋಡಿದರೆ ನಿನಗೆ ಅರ್ಥವಾಗುವುದಿಲ್ಲ. ನಾನು ಓದುವ ಗ್ರಂಥ ಅರಬ್ಬಿ ಭಾಷೆಯಲ್ಲಿದೆ. ತೆಲುಗುಭಾಷೆ ಆದರೆ ನಿನಗೆ ಅರ್ಥವಾಗುತ್ತದೆ.

**ನಾನು :–** ಸರಿ ನಿನಗೆ ಅರ್ಥವಾಗಿರುವುದನ್ನೇ ನನಗೆ ಸ್ವಲ್ಪ ಹೇಳು, ನಾನು ಅರ್ಥಮಾಡಿಕೊಳ್ಳುತ್ತೇನೆ.

**ಆತನು :–** ನನಗೆ ಅರ್ಥವಾಗಿದ್ದರೆ ಅಲ್ಲವೆ! ನಿನಗೆ ನಾನು ಹೇಳುವುದು. ಅರಬ್ಬಿ ಭಾಷೆಯಲ್ಲಿನ ಅಕ್ಷರಗಳು ಮಾತ್ರ ತಿಳಿದಿದೆ. ಅರಬ್ಬಿ ಭಾಷೆ ನನಗೆ ಬರುವುದಿಲ್ಲ. ಆದ್ದರಿಂದ ಆ ಭಾಷೆಯಲ್ಲಿ ಏನು ಬರೆದಿದ್ದಾರೊ ನನಗೆ ತಿಳಿಯದು.

**ನಾನು :–** ಭಾಷೆ ತಿಳಿಯದಿರುವಾಗ, ಭಾವ ಅರ್ಥವಾಗದಿರುವಾಗ, ಆ ಗ್ರಂಥವನ್ನು ಏಕೆ ಓದಬೇಕು? ಕನ್ನಡ ಭಾಷೆಯಲ್ಲಿರುವ ಗ್ರಂಥವನ್ನು ಕನ್ನಡದಲ್ಲಿ ಓದಿಕೊಂಡು ಅರ್ಥ ಮಾಡಿಕೊಳ್ಳಬಹುದು ಅಲ್ಲವೆ! ಆಗ ಖುರ್ಆನ್‌ನಲ್ಲಿ ಏನಿದೆಯೋ ಸುಲಭವಾಗಿ ತಿಳಿಯುತ್ತದೆ ಅಲ್ಲವೆ!

**ಆತನು :–** ನೀನು ಹೇಳಿರುವುದು ನಿಜವೆ ಆದರೂ, ನಾನು ಮುಸ್ಲಿಮ್‌ನು ಆದ್ದರಿಂದ ನಮ್ಮ ಮತಾಚಾರದ ಪ್ರಕಾರ ಖುರ್ಆನ್ ಗ್ರಂಥವನ್ನು ಅರಬ್ಬಿ ಭಾಷೆಯಲ್ಲಿಯೇ ಓದಬೇಕು. ಅರ್ಥವಾಗದಿದ್ದರೂ ಫರವಾಗಿಲ್ಲ. ಮೊದಲು ಅರಬ್ಬಿ ಭಾಷೆಯಲ್ಲಿ ಬರೆಯಲ್ಪಟ್ಟ ಗ್ರಂಥವಾಗಿರುವುದರಿಂದ, ಅದನ್ನು ಅರಬ್ಬಿ ಭಾಷೆಯಲ್ಲಿಯೇ ಓದಬೇಕೆಂಬ ನಿಯಮ ನಮ್ಮ ಮತದಲ್ಲಿ ಇದೆ. ಆದ್ದರಿಂದ ನಮ್ಮ ಮತ ಹಿರಿಯರು ಹೇಳಿದಹಾಗೆ ಅರಬ್ಬಿ ಭಾಷೆಯಲ್ಲಿರುವ ಖುರ್ಆನ್ ಗ್ರಂಥವನ್ನು ಓದುತ್ತಿದ್ದೇನೆ.

**ನಾನು :– "ಅರ್ಥವಾಗದ ಓದು ವ್ಯರ್ಥ"** ಎನ್ನುವಂತೆ, ಅರಬ್ಬಿಭಾಷೆಯಲ್ಲಿನ ಖುರ್‌ಆನ್ ಅರ್ಥವಾಗದಿರುವಾಗ ಅದು ವ್ಯರ್ಥವೇ ಆಗುತ್ತದೆ ಅಲ್ಲವೆ! ಓದಿ ಪ್ರಯೋಜನೆ ಇರುವುದಿಲ್ಲ ಅಲ್ಲವೆ! ಅಂತಹದರಲ್ಲಿ ಕನ್ನಡ ಭಾಷೆಯಲ್ಲಿರುವ ಖುರ್‌ಆನ್ ಗ್ರಂಥವನ್ನು ಓದಿಕೊಳ್ಳಬಹುದು ಅಲ್ಲವೆ!

**ಆತನು :–** ಅರಬ್ಬಿ ಭಾಷೆ ದೈವ ಭಾಷೆಯೆಂದು, ದೇವರ ಗ್ರಂಥವಾದ ಖುರ್‌ಆನ್‌ನನ್ನು ಅರಬ್ಬಿ ಭಾಷೆಯಲ್ಲಿಯೆ ಓದಬೇಕೆಂದು, ಇತರ ಭಾಷೆಗಳಲ್ಲಿ ಓದಬಾರದೆಂದು, ನಮ್ಮ ಹಿರಿಯರು ಹೇಳುವುದರಿಂದ ನಾನು ಹಾಗೆ ಓದಬೇಕಾಗಿ ಬಂದಿದೆ. ಕನ್ನಡ ಭಾಷೆಯಲ್ಲಿ ಓದಿದರೆ ಖುರ್‌ಆನ್ ಗ್ರಂಥವನ್ನು ಓದಿದಂತೆ ದೇವರ ಲೆಕ್ಕದಲ್ಲಿ ಗುರುತಿಸಲ್ಪಡುವುದಿಲ್ಲವೆಂದು ನಮ್ಮ ಮತ ಹಿರಿಯರು ಹೇಳುತ್ತಿರುತ್ತಾರೆ. ಆದ್ದರಿಂದ ನಾವು ಎಂದರೆ ಮುಸ್ಲಿಮರೆಲ್ಲರೂ ವಿಧಿಯಾಗಿ ಅರಬ್ಬಿ ಭಾಷೆಯಲ್ಲಿಯೇ ಓದುತ್ತಿದ್ದೇವೆ.

**ನಾನು :–** ದೇವರ ಜ್ಞಾನ ಅರ್ಥವಾಗುವುದಕ್ಕೆ ಖುರ್‌ಆನ್ ಗ್ರಂಥವನ್ನು ಓದಬೇಕಾಗಲಿ, ದೇವರ ಲೆಕ್ಕದಲ್ಲಿ ಗುರುತಿಸಲ್ಪಡುವುದಕ್ಕೆ, ಲೆಕ್ಕಿಸಲ್ಪಡುವುದಕ್ಕೆ ಎಂದು ಓದಬಾರದು. ಖುರ್‌ಆನ್ ಗ್ರಂಥದಲ್ಲಿ ದೇವರ ಜ್ಞಾನವಿದೆ ಆದ್ದರಿಂದ, ಅದನ್ನು ತಿಳಿದುಕೊಳ್ಳುವುದಕ್ಕೆ ಗ್ರಂಥವನ್ನು ಓದಬೇಕಾಗಲಿ, ಯಾರ ಮೆಚ್ಚುಗೆಗಾಗಿ ಓದಬಾರದು. ಹಾಗೆ ಇತರರಿಗೆ ಭಯಪಟ್ಟು ಅವರು ಹೇಳಿದಹಾಗೆ ಓದಬಾರದು. ನಾನು ಕನ್ನಡದಲ್ಲಿರುವ ಖುರ್‌ಆನ್‌ನನ್ನು ಓದಿದ್ದೇನೆ. ಅದು ದೇವರ ಗ್ರಂಥವೆಂದು ನನಗೆ ಅರ್ಥವಾಗಿದೆ. ನಿನ್ನಂತೆ ಖುರ್‌ಆನ್‌ನನ್ನು ಅರಬ್ಬಿಭಾಷೆಯಲ್ಲಿ ಓದಬೇಕೆಂದು ನಾನು ಓದಿದ್ದರೆ ಅದು ದೇವರ ಗ್ರಂಥವೆಂದು ನನಗೆ ತಿಳಿಯುತ್ತಿರಲಿಲ್ಲ! ದೇವರ ಜ್ಞಾನ ತಿಳಿದುಕೊಳ್ಳುವುದಕ್ಕೆ ಖುರ್‌ಆನ್ ಗ್ರಂಥವನ್ನು ಮಾನವರಿಗೆ ದೇವರು ಕೊಟ್ಟಿದ್ದಾನೆ ಹೊರತು, ಇಂತಹ ಭಾಷೆಯಲ್ಲಿಯೆ ಓದಬೇಕೆಂದು ಹೇಳಲಿಲ್ಲ ಅಲ್ಲವೆ! ನನಗೆ ತಿಳಿದಿರುವವರೆಗು **"ಇಬ್ರಾಹೀಮ್" ಎಂಬ ಹದಿನಾಲ್ಕನೆಯ (14) ಸೂರಾದಲ್ಲಿ ನಾಲ್ಕನೆ (4) ಆಯತ್‌ನಲ್ಲಿ ಹೀಗೆ ಇದೆ ನೋಡು. "ನಾವು ಯಾವ ಪ್ರವಕ್ತನನ್ನು ಕಳಿಸಿದರೂ, ಆತನು ದೈವ ವಿಷಯಗಳನ್ನು ಸ್ಪಷ್ಟವಾಗಿ ಬಿಡಿಸಿ**

**ಹೇಳುವುದಕ್ಕೆ ಸಾಧ್ಯವಿರುವಂತೆ ತನ್ನ ಜಾತಿಯವರ ಭಾಷೆಯಲ್ಲಿ ಮಾತನಾಡುವವನನ್ನೆ ಕಳಿಸಿದ್ದೇವೆ. ಆಮೇಲೆ ಅಲ್ಲಾಹ್ (ದೇವರು) ತಾನು ಕೋರಿದವರನ್ನು ಅಪಮಾರ್ಗವನ್ನು ಹಿಡಿಸುತ್ತಾನೆ. ಹಾಗೆ ತಾನು ಕೋರಿದವರಿಗೆ ಸನ್ಮಾರ್ಗವನ್ನು ತೋರಿಸುತ್ತಾನೆ. ಆತನು ಸರ್ವಾಧಿಕಾರನು, ವಿವೇಕವಂತನು"** ಈ ವಾಕ್ಯದಲ್ಲಿ ದೈವಜ್ಞಾನಕ್ಕೆ ಬೆಲೆಯನ್ನು ಕೊಟ್ಟು ಹೇಳಿದ್ದಾನಾಗಲಿ, ಭಾಷೆಗೆ ಬೆಲೆಯನ್ನು ಕೊಡಲಿಲ್ಲ. ದೈವಜ್ಞಾನ ಅರ್ಥವಾಗುವುದಕ್ಕೆ ಅವನಿಗೆ ಬಂದ ಭಾಷೆಯಲ್ಲಿ ಬೋಧಿಸುವ ಬೋಧಕನನ್ನು ಕಳಿಸುತ್ತೇನೆ ಎಂದಿದ್ದಾನಾಗಲಿ, ಬೋಧಕನು (ಪ್ರವಕ್ತ) ಹೇಳಿದ ಭಾಷೆಯಲ್ಲಿಯೇ ಕೇಳೆಂದಾಗಲಿ, ಓದೆಂದಾಗಲಿ ಹೇಳಲಿಲ್ಲ ಅಲ್ಲವೆ! ದೇವರು ತನ್ನ ಜ್ಞಾನವನ್ನು ವಿವರವಾಗಿ ತಿಳಿಸುವುದಕ್ಕೆ ಮನುಷ್ಯನಿಗೆ ತಿಳಿದ ಭಾಷೆಯಲ್ಲಿ ಬೋಧಿಸುವಂತೆ ಬೋಧಕನನ್ನು ಕಳಿಸುತ್ತೇನೆ ಎಂದು ಹೇಳಿದಾಗ, ಕನ್ನಡ ಭಾಷೆ ಬರುವ ಭಕ್ತನಿಗೆ ಕನ್ನಡ ಭಾಷೆಯಲ್ಲಿನ ಖುರ್‌ಆನ್ ಗ್ರಂಥವನ್ನು ಕೊಟ್ಟಿದ್ದಾನೆಂದು ಏಕೆ ಅಂದುಕೊಳ್ಳಬಾರದು. **14ನೇ ಸೂರಾ, 4ನೇ ಆಯತ್** ಪ್ರಕಾರ ದೇವರಮಾತನ್ನು ಕೇಳಿದರೆ, ದೇವರ ಮಾತಿನಪ್ರಕಾರ ಖುರ್‌ಆನ್ ಗ್ರಂಥವನ್ನು ಯಾವ ಭಾಷೆಯಲ್ಲಿಯಾದರೂ ಓದಬಹುದು. ಹಾಗಲ್ಲದೆ ದೇವರಮಾತನ್ನು ಪಕಕ್ಕಿಟ್ಟು ಮತಹಿರಿಯರ ಮಾತುಗಳನ್ನು ಅನುಸರಿಸಿದರೆ ಖುರ್‌ಆನ್ ಗ್ರಂಥವನ್ನು ಅರಬ್ಬಿ ಭಾಷೆಯಲ್ಲಿಯೇ ಓದಬೇಕಾಗಿರುತ್ತದೆ. ಈಗ ಮನುಷ್ಯ ಯಾರ ಮಾತನ್ನು ಕೇಳುತ್ತಾನೊ ಆತನ ಮೇಲೆಯೇ ಆಧಾರಪಟ್ಟಿದೆ. ದೇವರ ಮಾತನ್ನು ಕೇಳಿದರೆ ಅವನನ್ನು ದೇವರು ಸನ್ಮಾರ್ಗದಲ್ಲಿ ಕಳಿಸುತ್ತಾನೆ. ದೇವರ ಮಾತನ್ನು ಕೇಳದಂತೆ ಇತರರ ಮಾತನ್ನು ಕೇಳುವವನನ್ನು ದೇವರು ಅಪಮಾರ್ಗದಲ್ಲಿ ಕಳಿಸುತ್ತಾನೆ. ಆ ಎರಡು ಮಾರ್ಗಗಳ ವಿಷಯ ಜಿಬ್ರಯೇಲ್ ಹೇಳಿದ ಮೇಲಿನ ವಾಕ್ಯಗಳಲ್ಲಿಯೆ ಇದೆ. ಅಷ್ಟೇಅಲ್ಲದೆ ಅದೇ ವಾಕ್ಯದಲ್ಲಿಯೆ ದೇವರು ಸರ್ವಾಧಿಕ್ಯನು, ವಿವೇಕವಂತನು ಎಂದು ಇದೆ. ಆತನು ಎಷ್ಟೋ ವಿವೇಕವಂತನು ಆದ್ದರಿಂದ ಮನುಷ್ಯ ಸುಲಭವಾಗಿ ಸನ್ಮಾರ್ಗದೊಳಗೆ ಹೋಗುವುದಕ್ಕೆ ಮನುಷ್ಯನಿಗೆ ಬರುವ ಭಾಷೆಯಲ್ಲಿಯೆ ಬೋಧಕನನ್ನು ಕಳಿಸುತ್ತೇನೆಂದಿದ್ದಾನೆ. ಅಷ್ಟೇಅಲ್ಲದೆ ದೇವರು ಸರ್ವಾಧಿಕಾರಿ ಆದ್ದರಿಂದ

ಆತನಿಗಿಂತ ಮೀರಿದವರು ಇಲ್ಲ. ಆದ್ದರಿಂದ ದೇವರಿಗಿಂತ ಮಠಾಧಿಪತಿಗಳು ದೊಡ್ಡವರಲ್ಲ. ಅವರಮಾತುಗಳನ್ನು ಕೇಳದಂತೆ ದೇವರ ಮಾತುಗಳನ್ನು ಕೇಳುವುದು ಒಳ್ಳೆಯದು.

**ಆತನು :–** ಖುರ್‌ಆನ್‌ನಲ್ಲಿಯೇ ದೇವರು ಆ ರೀತಿಯಾಗಿ ಹೇಳಿದ್ದರೆ ನಮ್ಮ ಮತ ಹಿರಿಯರು ಏಕೆ ಹಾಗೆ ಹೇಳಿದ್ದಾರೆ?

**ನಾನು :–** ನಾನು ಹೇಳಿರುವುದು ಖುರ್‌ಆನ್‌ನಲ್ಲಿನ ವಾಕ್ಯ. ಅವರು ಹೇಳಿರುವುದು ಹದೀಸಿನಲ್ಲಿನ ವಾಕ್ಯ. ಒಂದು ವಿಧವಾಗಿ ಹೇಳಿದರೆ ಖುರ್‌ಆನ್ ಓದುವವನಿಗೆ ಯಾವತ್ತಿಗಾದರೂ ಜ್ಞಾನ ತಿಳಿಯಬಲ್ಲದು. ಆತನು ದೇವರ ಮಾರ್ಗದಲ್ಲಿ ಕಳಿಸಲ್ಪಡುತ್ತಾನೆ. ಖುರ್‌ಆನ್‌ನನ್ನು ಬಿಟ್ಟು ಪಕ್ಕ ಗ್ರಂಥಗಳಲ್ಲಿನ ವಾಕ್ಯಗಳನ್ನು ಹೇಳುವವರು ಅಪಮಾರ್ಗದಲ್ಲಿ (ಮಾಯಮಾರ್ಗದಲ್ಲಿ) ಕಳಿಸಲ್ಪಡುತ್ತಾರೆ. ಆದ್ದರಿಂದ ಮತವನ್ನು, ಮತ ನಿಯಮವನ್ನು ಬಿಟ್ಟು, ದೇವರನ್ನು ದೇವರ ಜ್ಞಾನವನ್ನು ಆಶ್ರಯಿಸುವುದಕ್ಕೆ ನಿನ್ನ ಮತ ಗ್ರಂಥವಾದ ಖುರ್‌ಆನ್‌ನನ್ನು ನಿನಗೆ ಇಷ್ಟವಾದ ಭಾಷೆಯಲ್ಲಿ ಓದಿ ತಿಳಿದುಕೋ,

**ಆತನು :–** ಹಾಗೆ ಓದಿದರೆ ನಮ್ಮ ಮತ ಹಿರಿಯರ ಹತ್ತಿರ ಏನಾದರೂ ತೊಂದರೆ ಬರುತ್ತದೇನೊ?

**ನಾನು :–** ನೀನು ಮಾಡುವುದು ಒಳ್ಳೆಯ ಕೆಲಸವೇ ಆದಾಗ ಅವರಿಂದ ಯಾವ ತೊಂದರೆ ಇರುವುದಿಲ್ಲ. ಮೇಲಾಗಿ ದೇವರಿಗೆ ತಿಳಿಯದಂತೆ ಏನು ನಡೆಯುವುದಿಲ್ಲ. ನೀನು ದೇವರ ವಿಷಯದಲ್ಲಿ ಭಯಪಡು. ಮನುಷ್ಯರ ವಿಷಯದಲ್ಲಿ ಭಯಪಡಬೇಡ.

(ಈ ವಿಧವಾಗಿ ನಡೆದ ನಮ್ಮ ಸಂಭಾಷಣೆಯಲ್ಲಿ ಮುಸ್ಲಿಮ್ ಯುವಕನಲ್ಲಿ ಮುಖ್ಯವಾಗಿ ಮತವೊಂದರ ಭಯ ಕಾಣಿಸಿದೆ.) ಭಯ ಇರುವವರೆಗು ಮನುಷ್ಯನಿಗೆ ಜ್ಞಾನ ತಿಳಿಯದು. ಭಯ ಪರಧರ್ಮವಾಗುತ್ತದೆ. ಧೈರ್ಯ ಸ್ವಧರ್ಮವಾಗುತ್ತದೆ. ಪರಧರ್ಮವೆಂದರೆ ಅಧರ್ಮವಾದ ಮಾಯೆಯೊಂದರ ಧರ್ಮ. ಸ್ವಧರ್ಮವೆಂದರೆ

ನಿಜಧರ್ಮವಾದ ದೈವಧರ್ಮವಾಗುತ್ತದೆ. ಪರಧರ್ಮವನ್ನು ಸ್ವಧರ್ಮವನ್ನು ಕುರಿತು ಮಾತ್ರ ಗ್ರಂಥವಾದ ಭಗವದ್ಗೀತೆಯಲ್ಲಿ ಕರ್ಮಯೋಗವೆಂಬ ಅಧ್ಯಾಯದಲ್ಲಿ 35ನೇ ಶ್ಲೋಕದಲ್ಲಿ ಈ ವಿಧವಾಗಿ ಹೇಳಿದ್ದಾರೆ.

**ಶ್ಲೋ॥ ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್।**
**ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ॥**

ಭಾವನೆ :– **"ಪರಧರ್ಮವೆಂಬ ಅಧರ್ಮ ಆಚರಿಸುವುದಕ್ಕೆ ಅನುಕೂಲವಾಗಿ ಇದ್ದರೂ, ಗುಣಗಳಿಲ್ಲದಿರುವುದಾದ ಸ್ವಧರ್ಮವೇ ಮೇಲು. ಪರಧರ್ಮದಲ್ಲಿನ ಭಯಕ್ಕಿಂತ ಸ್ವಧರ್ಮದಲ್ಲಿನ ಮರಣವೇ ಮೇಲು."** ಪರಧರ್ಮವಾದ ಅಧರ್ಮ ಇಲ್ಲವೆ ಮಾಯೆ ಧರ್ಮದಲ್ಲಿನ ಭಯಕ್ಕಿಂತ, ಸ್ವಧರ್ಮದಲ್ಲಿ ಮರಣವಾದರೂ ಮೇಲೆಂದು ಭಗವಂತನು ಹೇಳಿದ್ದಾನೆ. ಆದ್ದರಿಂದ ಭಯವನ್ನು ಬಿಟ್ಟು ಧೈರ್ಯವಾಗಿ ದೇವರ ವಿಷಯದಲ್ಲಿ ಮುಂದಕ್ಕೆ ಹೋಗಬೇಕೆಂದು ಹಾಗೆ ಧೈರ್ಯವಾಗಿ ಮುಂದಕ್ಕೆ ಹೋದಾಗ ಮರಣ ಸಂಭವಿಸಿದರೂ ಆತನು ದೈವಸನ್ನಿಧಿಗೆ ಹೋಗುತ್ತಾನೆಂದು ಮೇಲಿನ ಶ್ಲೋಕದಲ್ಲಿನ ಅಂತರಾರ್ಥವು.

ಹಿಂದೂಗಳು ಯಾವ ವಿಧವಾಗಿ ಭಗವದ್ಗೀತೆಯಲ್ಲಿ ಜ್ಞಾನವನ್ನು ತಿಳಿಯದಂತಿದ್ದಾರೊ, ಅದೇ ವಿಧವಾಗಿ ಮುಸ್ಲಿಮ್‌ರು ಸಹ ಬಹಳಜನ ಖುರ್‌ಆನ್‌ನಲ್ಲಿನ ಜ್ಞಾನವನ್ನು ತಿಳಿಯದಂತಿದ್ದಾರೆಂದೇ ಹೇಳಬಹುದು. ಕೆಲವರು ಗ್ರಂಥಗಳನ್ನು ಓದಿದರೂ ಅದರಲ್ಲಿನ ನಿಜ ಜ್ಞಾನವನ್ನು ತಿಳಿದುಕೊಳ್ಳದಿದ್ದಾರೆಂದು ಹೇಳಬಹುದು. ಕೆಲವರು ಮುಸ್ಲಿಮ್‌ರು ಖುರ್‌ಆನ್ ಗ್ರಂಥವನ್ನು ಓದಿದರೂ ಅದರಲ್ಲಿನ ಜ್ಞಾನವನ್ನೂ, ಹದೀಸು ಗ್ರಂಥಗಳಲ್ಲಿನ ಜ್ಞಾನವನ್ನು ಎರಡನ್ನು ಸೇರಿಸಿಕೊಂಡು ಎರಡನ್ನು ಸಮಾನವಾಗಿ ಹೇಳಿಕೊಳ್ಳುತ್ತಿದ್ದಾರೆ. ಕೆಲವರಾದರೆ ಯಾವುದು ಖುರ್‌ಆನ್ ಗ್ರಂಥಗಳಲ್ಲಿ ಇರುವುದೊ, ಯಾವುದು ಹದೀಸು ಗ್ರಂಥಗಳಲ್ಲಿ ಇರುವುದೊ ಸಹ ತಿಳಿಯದೆ ಎರಡಕ್ಕು ದೇವರ ಜ್ಞಾನವೆಂದು ಹೆಸರಿಡುತ್ತಿದ್ದಾರೆ. ಪವಿತ್ರ ಯುದ್ಧವೆಂಬ ಹೆಸರು ಖುರ್‌ಆನ್ ಗ್ರಂಥದಲ್ಲಿ ಇಲ್ಲದಿದ್ದರೂ, ಅದಕ್ಕೆ

**"ಜೀಹಾದ್"** ಎಂಬ ಹೆಸರಿನಿಂದ ಪ್ರಸ್ತಾವಿಸುತ್ತಾ, ಅದನ್ನು ದೇವರು ಹೇಳಿದಂತೆ ಹೇಳಿಕೊಳ್ಳುತ್ತಿರುತ್ತಾರೆ. ಮತ್ತೆ ಕೆಲವರು ಮುಸ್ಲಿಮ್‌ರು ತಾವು ಹತ್ಯೆಗಳು ಮಾಡಿ ಅದನ್ನು ಜೀಹಾದ್ ಆಗಿ ವರ್ಣಿಸಿಕೊಳ್ಳುತ್ತಿದ್ದಾರೆ. ಅಂತಹವರು ಉಳಿದ ಮುಸ್ಲಿಮ್‌ರಿಗೆ ಸಹ **"ಜೀಹಾದ್"** ಎಂಬ ಮಾತನ್ನು ಹೇಳಿ, ಅದನ್ನು ಪವಿತ್ರ ಯುದ್ದವಾಗಿ ಅಭಿವರ್ಣಿಸುವುದರಿಂದ, ಏನೂ ತಿಳಿಯದ ಮುಸ್ಲಿಮ್‌ರು ಕೆಲವರು ಮನುಷ್ಯರನ್ನು ಸಾಯಿಸುವುದೆ ಕೆಲಸವಾಗಿ ಇಟ್ಟುಕೊಂಡು ಅದೇ ನಿಜವಾದ ದೈವಮಾರ್ಗವಾಗಿ ತಿಳಿಯುತ್ತಿದ್ದಾರೆ. ಅದನ್ನೆ ಜೀಹಾದಾಗಿ ಪವಿತ್ರಯುದ್ಧವಾಗಿ ವರ್ಣಿಸಿ ಹೇಳುತ್ತಿದ್ದಾರೆ. ಒಂದುಬಾರಿ ಸುಮಾರು ಹತ್ತು ವರ್ಷಗಳ ಕೆಳಗೆ ನಾನು ಢಿಲ್ಲಿಯಿಂದ ಹೈದರಾಬಾದ್‌ಗೆ ರೈಲು ಪ್ರಯಾಣ ಮಾಡುವಾಗ ಕಡಪಗೆ ಹೋಗಬೇಕೆಂದು ನಾನು ಹತ್ತಿದ ಎ.ಪಿ ಎಕ್ಸ್‌ಪ್ರೆಸ್‌ನಲ್ಲಿಯೇ ಮುಸ್ಲಿಮ್ ಯುವಕನು ಹತ್ತಿದ್ದಾನೆ. ಇಬ್ಬರೂ ಒಂದೇ ಫಸ್ಟ್‌ಕ್ಲಾಸ್ ಬೋಗಿಯಲ್ಲಿ ಪ್ರಯಾಣಿಸುತ್ತಾ ಎದುರೆದುರು ಸೀಟಿನಲ್ಲಿ ಕುಳಿತುಕೊಳ್ಳುವುದು ನಡೆದಿದೆ. ಆತನು ಢಿಲ್ಲಿ ರೈಲ್ವೇಸ್ಟೇಷನ್‌ನಲ್ಲಿಯೇ ಪರಿಚಯವಾಗಿದ್ದಾನೆ. ಆತನು ಕಡಪ ನಿವಾಸಿ ಆಗಿರುವುದರಿಂದ, ನಾನು ಕಡಪಜಿಲ್ಲೆ ಯರ್ರಗುಂಟ್ಲ ಊರಿನ ಹೈಸ್ಕೂಲು ಓದು ಓದಿರುವುದರಿಂದ, ಜಿಲ್ಲಾ ಪರಿಚಯದಿಂದ ಆ ಯುವಕನು ಬಹಳ ಪರಿಚಯ ಆಗುವುದು ನಡೆದಿದೆ. ಆ ದಿನ ಯುಗಾದಿ ಹಬ್ಬ ದಿನವಾದ್ದರಿಂದ, ಪ್ಯಾಸಿಂಜರ್ಸ್ ಕಡಿಮೆ ಇರುವುದರಿಂದ, ನಾವು ಕುಳಿತುಕೊಂಡಕಡೆ ನಾವು ಹೊರತು ಇತರರ್ಯಾರೂ ಇಲ್ಲ. ಆಗ ಇಬ್ಬರೂ ಯಾವ ಮುಚ್ಚುಮರೆ ಇಲ್ಲದೆ ಮನಸ್ಸು ಬಿಚ್ಚಿ (ತೆರೆದ ಹೃದಯದಿಂದ) ಮಾತನಾಡುವುದರಿಂದ ನನ್ನ ವ್ಯಕ್ತಿಗತ ವಿಷಯಗಳು ಆತನಿಗೆ, ಆತನ ವ್ಯಕ್ತಿಗತ ವಿಷಯಗಳು ನನಗೂ ಒಬ್ಬರಿಗೊಬ್ಬರು ಹೇಳಿಕೊಳ್ಳುವುದು ನಡೆದಿದೆ. ಹಾಗೆ ಮಾತನಾಡುವಾಗ ಮಾತುಗಳ ಸಂದರ್ಭದಲ್ಲಿ ಆತನು ಕಡಪದಿಂದ ಹೋಗಿ ಕಾಶ್ಮೀರದಲ್ಲಿ ಒಂದು ತೀವ್ರವಾದ ಸಂಸ್ಥೆಯಲ್ಲಿ ಕೆಲಸಮಾಡು ವಂತೆ ಹೇಳುವುದು ನಡೆದಿದೆ. ತಾನು ಕಡಪ ಬಿಟ್ಟುಹೋಗಿ ಎರಡು ವರ್ಷಗಳು ಆಗಿದೆಯೆಂದು, ಆಗಿನಿಂದ ಈಗ ತನ್ನ ಅಮ್ಮನನ್ನು ನೋಡುವುದಕ್ಕೆ ಬರುತ್ತಿದ್ದೇನೆಂದು, ವಾರ ದಿನಗಳಿದ್ದು ಪುನಃ ಕಾಶ್ಮೀರಕ್ಕೆ ಹೋಗುತ್ತೇನೆಂದು

ಹೇಳುವುದು ನಡೆದಿದೆ. ಹಾಗೆ ಆತನು ಎಲ್ಲಾ ವಿಷಯಗಳು ನನ್ನಜೊತೆ ಹೇಳುವುದಕ್ಕೆ ಒಂದು ಕಾರಣ ಇದೆ. ನಾನು ಢಿಲ್ಲಿ ಪ್ಲಾಟ್‌ಫಾರಮ್ ಮೇಲೆ ಕುಳಿತುಕೊಂಡು "ಮುಸ್ಲಿಮ್ ಜೀವನ ವಿಧಾನ" ಎಂಬ ಗ್ರಂಥವನ್ನು ಓದುವುದು ಆತನು ನೋಡಿದ್ದಾನೆ. ಆತನು ನನ್ನ ಹತ್ತಿರಕ್ಕೆ ಬಂದು ಗ್ರಂಥವನ್ನು ನೋಡುತ್ತಾ ನೀವು ಮುಸ್ಲಿಮಾ? ಎಂದು ಕೇಳಿದನು. ಹೌದು! ಎಂದು ನನಗೆ ತಿಳಿಯದೆಯೇ ಉತ್ತರ ಹೇಳುವುದಾಗಿದೆ. ನಾನು ಏಕೆ ಹಾಗೆ ಹೇಳಿದ್ದೇನೆಂದು ಒಂದು ಕ್ಷಣ ಆಲೋಚಿಸಿದೆನು. ಸರಿ ಅದರಲ್ಲಿ ದೊಡ್ಡ ತಪ್ಪೇನಿದೆ ಎಂದು ಅಂದುಕೊಂಡೆನು. ಭಾಷಾ ಎಂಬ ಆ ಯುವಕನು ಸುಮಾರು 25 ವರ್ಷಗಳ ವಯಸ್ಸಿರುವವನು, ನನ್ನ ಮಾತನ್ನು ಕೇಳಿ ನಾನು ಮುಸ್ಲಿಮನೇ ಎಂದು ನಂಬಿದ್ದಾನೆ. ಆ ನಂಬಿಕೆಯಿಂದ ನನ್ನೊಂದಿಗೆ ಏನು ಮುಚ್ಚಿಡದೆ ಮಾತನಾಡುವುದು ಆರಂಭಿಸಿದ್ದಾನೆ. ಆಗ ನಮ್ಮ ಸಂಭಾಷಣೆ ಹೀಗೆ ಮುಂದುವರೆದಿದೆ.

**ಭಾಷಾ :–** ನೀವು ಓದುತ್ತಿರುವ ಪುಸ್ತಕವನ್ನು ನನಗೆ ಕೊಡುತ್ತೀರಾ, ನಾನು ಹಣಕೊಡುತ್ತೇನೆ.

**ನಾನು :–** ಹತ್ತು ಪೇಜೀಗಳು ಓದಿದರೆ ಮುಗಿಯುತ್ತದೆ. ಹತ್ತು ನಿಮಿಷಗಳಲ್ಲಿ ಕೊಡುತ್ತೇನೆ, ಆದರೆ ಪುಸ್ತಕವನ್ನು ಮಾತ್ರ ಮಾರುವುದಿಲ್ಲ. ದೈವ ಸಂಬಂಧವಾದದ್ದನ್ನು ಉಚಿತವಾಗಿ ಕೊಡಬಹುದಾಗಲೀ ಹಣಕ್ಕೆ ಮಾರಬಾರದು. ನಾನು ಹೈದರಾಬಾದಿನಲ್ಲಿ ಇನ್ನೊಂದು ಪುಸ್ತಕವನ್ನು ತೆಗೆದುಕೊಳ್ಳುತ್ತೇನೆ. ಇದನ್ನು ನೀನು ತೆಗೆದುಕೋ. ಓದುವವರೇ ಬೇಕು.

**ಭಾಷಾ :–** ನೀವು ಖುರ್‌ಆನ್ ಓದಿದ್ದೀರಾ?

**ನಾನು :–** ಓದಿದ್ದೇನೆ. ಅದು ಅಂತಿಮದೈವಗ್ರಂಥ. ಅದನ್ನು ಓದಿದರೆ ಎಷ್ಟೋ ಮಹಿಯ್ವವಿರುವ ಜ್ಞಾನ ತಿಳಿಯಬಲ್ಲದು.

**ಭಾಷಾ :–** ನನಗೆ ಖುರ್‌ಆನ್ ಗ್ರಂಥವನ್ನು ಓದಬೇಕೆಂದಿದೆ ಆದರೆ ಇಲ್ಲಿಯವರೆಗು ಓದಲಿಲ್ಲ. ಖುರ್‌ಆನ್ ಗ್ರಂಥವನ್ನು ಓದದಿರುವುದಕ್ಕೆ ಬಾಧೆಪಡುತ್ತಿದ್ದೇನೆ.

**ನಾನು :–** ಇಷ್ಟು ಆಸಕ್ತಿ ಇರುವವನು ಇಷ್ಟು ಕಾಲ ಏಕೆ ಓದಲಿಲ್ಲ? ದೇವರ ವಿಷಯದಲ್ಲಿ ಆಲಸ್ಯ ಒಳ್ಳೆಯದಲ್ಲ.

**ಭಾಷಾ :–** ಆದೂ ನಿಜವೇ, ಒಂದು ವಿಧವಾಗಿ ದೇವರ ಕೆಲಸದಲ್ಲಿಯೇ ಇದ್ದಾನೆ, ಆ ಕೆಲಸಲ್ಲಿ ಓದುವುದಕ್ಕೆ ಅವಕಾಶ ಇರುವುದಿಲ್ಲ. ಖುರ್‌ಆನ್‌ನ್ನು ಓದಲಿಲ್ಲ. ಎಂಬ ಬಾಧೆ ಒಂದುಕಡೆ ಇದ್ದರೂ, ಮತ್ತೊಂದುಕಡೆ ನಾನು ದೇವರ ಕೆಲಸದಲ್ಲಿದ್ದೇನೆ ಎಂಬ ತೃಪ್ತಿ ಇದೆ.

**ನಾನು :–** ಪ್ರಪಂಚದ ಕೆಲಸಗಳು ಯಾವುವು ದೇವರ ಕೆಲಸದಿಂದಾಗಲಿ, ದೇವರ ಜ್ಞಾನದಿಂದಾಗಲಿ ಸಮಾನವಲ್ಲ. ನೀನು ಕಾಶ್ಮೀರದಲ್ಲಿ ವ್ಯಾಪಾರ ಮಾಡುತ್ತಿದ್ದೇನೆಂದು ಹೇಳಿದ್ದೀಯಾ. ವ್ಯಾಪಾರ ಮಾಡಿದರೆ ಅದು ದೇವರ ಕೆಲಸ ಹೇಗೆ ಆಗುತ್ತದೆ? ಅದರಲ್ಲಿ ತೃಪ್ತಿ ಹೇಗೆ ಇರುತ್ತದೆ?

**ಭಾಷಾ :–** ನೀನು ನನಗೆ ಸ್ವಂತ ಅಣ್ಣನಂತವನು. ನಿನ್ನ ಹತ್ತಿರ ನಾನು ಸುಳ್ಳು ಹೇಳಬಾರದು. ನಾನು ಕಾಶ್ಮೀರದಲ್ಲಿ ವ್ಯಾಪಾರ ಮಾಡಲಿಲ್ಲ. ಅಲ್ಲಾಗೋಸ್ಕರ ಕೆಲಸ ಮಾಡುತ್ತಿದ್ದೇನೆ. ದೇವರಮಾರ್ಗದಲ್ಲಿ ಎಲ್ಲರಿಗಿಂತ ಹೆಚ್ಚಾಗಿ ಶ್ರಮ ಪಡುತ್ತಿದ್ದೇನೆ.

**ನಾನು :–** ಖುರ್‌ಆನ್ ಓದದೆ ನೀನು ಅಲ್ಲಾಗೋಸ್ಕರ ಏನು ಮಾಡುತ್ತಿಯಾ? ನೀನು ಮಾಡುವ ಕೆಲಸ ಎಂತಹದ್ದೊ, ಅದರಲ್ಲಿ ಫಲಿತ ಏನಿರುತ್ತದೊ ಖುರ್‌ಆನ್ ಗ್ರಂಥ ಹೇಳಬಲ್ಲದು. ಒಬ್ಬ ಮುಸ್ಲಿಮ್‌ನಾಗಿದ್ದು ಖುರ್‌ಆನ್ ಓದದೆ ದೇವರಿಗೋಸ್ಕರ ಕೆಲಸಮಾಡುತ್ತೇನೆಂದು ಹೇಳುವುದು ಒಳ್ಳೆಯದಲ್ಲ. ಏಕೆಂದರೆ! ದೇವರ ಕೆಲಸಗಳಂತೆ ಸೈತಾನ್ ಕೆಲಸಗಳಿರುತ್ತವೆ. ಅಷ್ಟಕ್ಕೂ ನೀನು ದೇವರಿ ಗೋಸ್ಕರ ದೇವರ ಕೆಲಸ ಏನು ಮಾಡುತ್ತಿದ್ದೀಯಾ?

**ಭಾಷಾ :–** ಜೀಹಾದ್‌ನ್ನು ನಾನು ನನ್ನ ಜೀವನ ವೃತ್ತಿಯಾಗಿ ತೆಗೆದುಕೊಂಡಿದ್ದೇನೆ. ನಾನು ಸ್ವಚ್ಛವಾದ ಜೀಹಾದ್‌ನು. ದೇವರಮಾರ್ಗದಲ್ಲಿ ಎಲ್ಲದಕ್ಕಿಂತ ಉತ್ತಮವಾದ ಕೆಲಸವಾದ್ದರಿಂದ ಅದನ್ನೆ ನಾನೂ ಆಯ್ಕೆ ಮಾಡಿಕೊಂಡಿದ್ದೇನೆ.

**ನಾನು :–** ಜೀಹಾದ್ ಎಂಬ ಪದ ಖುರ್‌ಆನ್ ಗ್ರಂಥದಲ್ಲಿ ಹುಡುಕಿದರೂ ಸಿಗುವುದಿಲ್ಲ. ಜೀಹಾದ್ ಎನ್ನುವ ಪದವೇ ಖುರ್‌ಆನ್ ಗ್ರಂಥದಲ್ಲಿ ಹೇಳದಿರುವಾಗ, ಅದನ್ನು ನೀನು ದೇವರ ಮಾರ್ಗದಲ್ಲಿ ಉತ್ತಮ ಕೆಲಸವಾಗಿ ಹೇಗೆ ಅಂದುಕೊಂಡಿದ್ದೀಯಾ. ಜೀಹಾದ್ ಅನ್ನೋದು ಒಂದು ವೃತ್ತಿಯಾ? ಜೀಹಾದ್ ಅನ್ನೋದು ಯಾವ ಕೆಲಸವನ್ನು ಹೇಳುತ್ತಿದೆ?

**ಭಾಷಾ :–** ಅಲ್ಲಾ ಮಾರ್ಗದಲ್ಲಿ ಆತಂಕಗಳು ಉಂಟುಮಾಡುವವರನ್ನು, ಅಲ್ಲಾನನ್ನು ವಿಶ್ವಾಸಿಸದವರನ್ನು, ಅಲ್ಲಾಸ್ಥಾನದಲ್ಲಿ ಇತರರನ್ನು ಆರಾಧಿಸುವವರನ್ನು ಎದುರಿಸಿ ಹೋರಾಡಿ ಸಾಯಿಸುವುದೇ ಪವಿತ್ರಯುದ್ಧ ಇಲ್ಲವೆ ಜೀಹಾದ್ ಎನ್ನುತ್ತಾರೆಂದು ನಿಮಗೆ ತಿಳಿಯದಾ?

**ನಾನು :–** ಅಂತಿಮ ದೈವಗ್ರಂಥವಾದ ಖುರ್‌ಆನ್‌ನಲ್ಲಿ ಇಲ್ಲದ ವಿಷಯವನ್ನು ನಾನು ನಂಬುವುದಿಲ್ಲ. ಪವಿತ್ರಯುದ್ಧ ಎಂಬ ಹೆಸರನ್ನು ಕೇಳಿದ್ದೇನೆ. ಅದನ್ನೆ ಜೀಹಾದ್ ಎನ್ನುವುದು ಸಹ ಕೇಳಿದ್ದೇನೆ. ಪವಿತ್ರಯುದ್ಧ ಎಂದರೆ ಅದು ಪವಿತ್ರವಾಗಿಯೇ ಇರಬೇಕು ಹೊರತು ಅಪವಿತ್ರವಾಗಿ ಇರಬಾರದು. ದೇವರ ಜ್ಞಾನಕ್ಕೆ, ದೇವರ ಮಾತಿಗೆ, ಖುರ್‌ಆನ್‌ನಲ್ಲಿನ ವಾಕ್ಯಕ್ಕೆ ವಿರುದ್ಧವಾದ ಕೆಲಸವನ್ನು ಪವಿತ್ರ ಯುದ್ಧ ಎಂದು ಹೇಳುವುದು ತಪ್ಪಾಗುತ್ತದೆ. ಖುರ್‌ಆನ್ ವಾಕ್ಯಕ್ಕೂ, ದೇವರ ವಾಕ್ಯಕ್ಕೂ ವಿರುದ್ಧವಾಗಿರುವುದು ಎಂದಿಗೂ ಪವಿತ್ರ ಅಲ್ಲ. ಅಜ್ಞಾನಿಗಳಾದವರು ಜ್ಞಾನ ತಿಳಿಯದವರೆಗು ದೇವರನ್ನು ವಿಶ್ವಾಸಿಸುವುದಿಲ್ಲ. ಅಂತಹವರಿಗೆ ದೇವರ ಜ್ಞಾನವನ್ನು ತಿಳಿಸಿ, ದೇವರ ಜ್ಞಾನವೊಂದರ ರುಚಿಯನ್ನು ತೋರಿಸಿ ದೇವರ ಮಾರ್ಗದಕಡೆ ಮರಳಿಸಬೇಕಾಗಲಿ, ಸಾಯಿಸುವುದು ಒಳ್ಳೆಯದಲ್ಲ. **ದೇವರ ಅನುಮತಿ ಇಲ್ಲದೆ ಯಾರಾಗಲಿ ಜ್ಞಾನಿ ಆಗಲಾರನು, ಅಜ್ಞಾನಿ ಆಗಲಾರನು. ಒಬ್ಬ ಮನುಷ್ಯನನ್ನು ಅಜ್ಞಾನಿಯಾಗಿ ಬದಲಾಯಿಸುವು ದಕ್ಕಾಗಲಿ, ಜ್ಞಾನಿಯಾಗಿ ಬದಲಾಯಿಸುವುದಕ್ಕಾಗಲಿ ದೇವರೆ ಅಧಿಪತಿ. ಈ ವಿಷಯವನ್ನು ಖುರ್‌ಆನ್ ಗ್ರಂಥದಲ್ಲಿ ಆರನೆ ಸೂರಾದಲ್ಲಿ (6–110,111 ಆಯತ್‌ಗಳಲ್ಲಿ ಬರೆಯಲ್ಪಟ್ಟಿದೆ. ಅಲ್ಲಾ ಅಂದುಕೊಂಡರೆ ಏನಾದರೂ ಮಾಡಬಲ್ಲನು.** ಅಷ್ಟೇಯಾಗಲಿ ನಾವು

ದೇವರು ಹೇಳದ ಕೆಲಸವನ್ನು ಮಾಡಿದರೆ ಅದು ಪಾಪದ ಕೆಲಸ ಆಗುತ್ತದಾಗಲಿ, ಎಷ್ಟುಮಾತ್ರ ಪವಿತ್ರವಾದ ಕೆಲಸವಲ್ಲ, ಪವಿತ್ರಯುದ್ಧವೂ ಅಲ್ಲ.

ಒಬ್ಬ ಮನುಷ್ಯನನ್ನು ಸಾಯಿಸಿ "ಅವನು ಅಜ್ಞಾನಿ, ದೇವರನ್ನು ವಿಶ್ವಾಸಿಸದವನು" ಎಂದು ಹೇಳಿದರೆ ಬಂದಿರುವ ಪಾಪ ಪುಣ್ಯವಾಗಿ ಬದಲಾಗುವುದಿಲ್ಲ. ಈ ವಿಷಯವನ್ನು ಕುರಿತು **ಪವಿತ್ರ ಖುರ್‌ಆನ್ ಗ್ರಂಥದಲ್ಲಿ ಸೂರಾ 5–32ನೇ ಆಯತ್‌ನಲ್ಲಿ ಹೀಗೆ ಹೇಳುವುದಾಗಿದೆ. "ಒಬ್ಬ ವ್ಯಕ್ತಿ ಕೊಲೆಯ ಬದಲಿಗೆ, ಅಥವಾ ಭೂಮಿಯಲ್ಲಿ ಕಲ್ಲೋಲವನ್ನು ವ್ಯಾಪಿಸುವಂತೆ ಮಾಡಿದಕ್ಕೆ ಬದಲಾಗಿ, ಅಥವಾ ಯಾವನಾದರೂ ಒಬ್ಬ ವ್ಯಕ್ತಿಯನ್ನು ಸಾಯಿಸಿದರೆ ಆತನು ಸರ್ವಮಾನವಜಾತಿಯನ್ನು ಸಾಯಿಸಿದಂತೆ ಆಗುತ್ತದೆ. ಯಾರಾದರೂ ಒಬ್ಬ ಮನುಷ್ಯನ ಪ್ರಾಣವನ್ನು ಕಾಪಾಡಿದರೆ ಆತನು ಸರ್ವಮಾನವಜಾತಿ ಪ್ರಾಣಗಳನ್ನು ಕಾಪಾಡಿದಂತೆ ಆಗುತ್ತದೆ ಈ ವಿಷಯವನ್ನು ನಮ್ಮ ಪ್ರವಕ್ತರು ತಿಳಿಸಿದ್ದಾರೆ. ಆದರೂ ಅಕ್ರಮಗಳು ಮಾಡುತ್ತಾ ಇತರರನ್ನು ಸಾಯಿಸುವವರು ಇದ್ದಾರೆ."** ದೇವರು ಈ ವಿಷಯವನ್ನು ತಿಳಿಸಿದ ನಂತರ ಪವಿತ್ರಯುದ್ಧ ಎನ್ನುವುದು ದೊಡ್ಡ ತಪ್ಪಾಗುತ್ತದೆ. ಅಷ್ಟೇಅಲ್ಲದೆ ದೊಡ್ಡ ಅಜ್ಞಾನವಾಗುತ್ತದೆ.

**ಭಾಷಾ :–** ನಮ್ಮ ಹಿರಿಯರು ನೀವು ಹೇಳಿದಂತೆ ಹೇಳಲಿಲ್ಲ. ಅಜ್ಞಾನಿಗಳನ್ನು, ವಿಗ್ರಹಾರಾಧಕರನ್ನು ಸಾಯಿಸುವುದೆ ಪವಿತ್ರಯುದ್ಧವೆಂದು, ಅದೇ ನಿಜವಾದ ದೇವರ ಕಾರ್ಯವೆಂದು, ದೇವರ ಕಾರ್ಯದಲ್ಲಿ ಮರಣಿಸಿದರೆ ಸ್ವರ್ಗಕ್ಕೆ ಹೋಗಬಹುದೆಂದು ಹೇಳಿದ್ದಾರೆ. ಅದು ಸತ್ಯವಲ್ಲ ಎನ್ನುತ್ತೀರಾ?

**ನಾನು :–** ಪವಿತ್ರ ಯುದ್ಧವೆನ್ನುವ ಹೆಸರೆ (ಜೀಹಾದ್ ಎಂಬ ಹೆಸರೆ) ದೈವಗ್ರಂಥವಾದ ಖುರ್‌ಆನ್‌ನಲ್ಲಿ ಇಲ್ಲ. ಅದು ಮನುಷ್ಯರು ಇಟ್ಟಿರುವ ಹೆಸರೆ ಹೊರತು, ದೇವರು ಹೇಳಿದ ಹೆಸರಲ್ಲ. ಒಂದು ವಿಧವಾಗಿ ಪವಿತ್ರಯುದ್ಧ ಎಂದರೆ ದೇವರಮಾರ್ಗದಲ್ಲಿ ಹೋರಾಟವೆಂದು ಹೇಳಬಹುದು. ದೇವರ ಮಾರ್ಗದಲ್ಲಿ ಹೋರಾಟ ಎಂದರೆ ಸ್ಥೂಲವಾಗಿ ಹೊರಗಿನ ಸಂಬಂಧಯುದ್ಧ

ಅಲ್ಲ. ಶರೀರದಲ್ಲಿಯೇ ಸೂಕ್ಷ್ಮವಾಗಿ ಕಾಣಿಸದೆ ಇರುವ ಗುಣಗಳೊಂದಿಗೆ ಹೋರಾಟವೆಂದು ತಿಳಿಯಬೇಕು.

**ಭಾಷಾ :–** ನಾನು ಇಲ್ಲಿಯವರೆಗೂ ದೊಡ್ಡದಾಗಿ ಅಂದುಕೊಂಡಿರುವುದು ಖುರ್‌ಆನ್ ಗ್ರಂಥದಲ್ಲಿ ಇಲ್ಲವೆಂದು ಮೊಟ್ಟಮೊದಲು ಈಗಲೇ ಕೇಳುತ್ತಿದ್ದೇನೆ. ದೇವರು ಹೇಳದೆಯೇ, ಖುರ್‌ಆನ್ ಗ್ರಂಥದಲ್ಲಿ ಇಲ್ಲದಿದ್ದರೂ ಏಕೆ ನನ್ನನ್ನು, ನನ್ನಂತಹವರನ್ನ ಕೆಲವರನ್ನು ಆಶ್ರಯಕೊಟ್ಟು ಎಲ್ಲದಕ್ಕಿಂತ ಜೀಹಾದ್ ದೇವರಿಗೆ ಹತ್ತಿರ ದಾರಿಯೆಂದು ಹೇಳಿದ್ದಾರೆ? ಇತರರನ್ನು ನಮ್ಮ ಮೂಲಕ ಏಕೆ ಸಾಯಿಸಬೇಕೆಂದುಕೊಂಡಿದ್ದಾರೆ? ಮತ ಹಿರಿಯರಲ್ಲಿ ಇಷ್ಟು ಅನ್ಯಾಯವಿದೆಯಾ?

**ನಾನು :–** ಒಂದು ಮುಸ್ಲಿಮ್ ಮತದಲ್ಲಿಯೇ ಅಲ್ಲ, ಎಲ್ಲಾ ಮತಗಳಲ್ಲಿ ಇದೇ ವಿಧಾನವಿದೆ. ಮುಸ್ಲಿಮ್ ಮತದಲ್ಲಿ ಜೀಹಾದ್ (ಪವಿತ್ರ ಯುದ್ಧ) ಎಂದು ಹೆಸರಿಟ್ಟು ಅಜ್ಞಾನವಾಗಿ ಪ್ರವರ್ತಿಸುತ್ತಿದ್ದಾರೆ. ಉಳಿದ ಮತಗಳಲ್ಲಿ ಪ್ರತ್ಯೇಕಿಸಿ ಹೆಸರು ಇಟ್ಟುಕೊಳ್ಳದೆ ಮುಸ್ಲಿಮ್‌ರು ಮಾಡಿದಂತೆ ಅವರೂ ಸಹ ಮಾಡುತ್ತಿದ್ದಾರೆ. ಉಳಿದ ಮತದವರೂ ಸಹ ಅಕ್ರಮ ಕಾರ್ಯಗಳಾದ ಇತರರನ್ನು ಹಿಂಸಿಸುವುದು ಇಲ್ಲವೆ ಸಾಯಿಸುವುದು ಮಾಡುತ್ತಲೇ ಇದ್ದಾರೆ. ಇದು ಎಲ್ಲಾ ಮತಗಳಲ್ಲಿಯೂ ವ್ಯಾಪಿಸಿದೆಯೆಂದು ಹೇಳುವುದಕ್ಕೆ ಅನುಮಾನವೆ ಇಲ್ಲ. ಹಾಗೆ ಎಲ್ಲಾ ಮತದವರು ಏಕೆ ಮಾಡುತ್ತಿದ್ದಾರಂದರೆ! ಪ್ರತಿ ಮತದಲ್ಲಿಯೂ ಒಂದು ಮತವ್ಯಾಪ್ತಿ, ಎರಡು ಮತರಕ್ಷಣೆ ಎಂಬ ಎರಡು ಕಾರ್ಯಗಳು ತಪ್ಪದೆ ಇಟ್ಟುಕೊಂಡಿದ್ದಾರೆ. ಒಂದು ಹಿಂದೂ ಮತದಲ್ಲಿ ಮತವ್ಯಾಪ್ತಿ ಇಲ್ಲ ಆದರೆ ಈ ಮಧ್ಯಕಾಲದಲ್ಲಿ ಮತರಕ್ಷಣೆ ಹೆಚ್ಚಾಗಿ ಇದೆಯೆಂದು ಹೇಳದೆ ತಪ್ಪುವುದಿಲ್ಲ. ಹಿಂದೂಮತದಲ್ಲಿ ಮತವ್ಯಾಪ್ತಿಗೋಸ್ಕರ ಸಂಘಗಳು ಏರ್ಪಡಲಿಲ್ಲವಾಗಲಿ, ಮತರಕ್ಷಣೆಗೋಸ್ಕರ ಕೆಲವು ಹೆಸರುಗಳಿಂದ ಸಂಘಗಳು ಏರ್ಪಟ್ಟಿವೆ. ಸ್ವಯಂಸೇವಕ್ ಎಂದು, ವಿಶ್ವ ಹಿಂದೂ ಪರಿಷತ್‌ಯೆಂದು, ಬಜರಂಗದಳ್‌ಯೆಂದು ಕೆಲವು ಹೆಸರುಗಳಿಂದ ಕೆಲವು ಸಂಘಗಳು ಏರ್ಪಟ್ಟ ವಿಷಯ ಎಲ್ಲರಿಗೂ ತಿಳಿದಿದೆ. ಮುಸ್ಲಿಮ್‌ರು ಮತವ್ಯಾಪ್ತಿಗೋಸ್ಕರ ಸಂಘಗಳನ್ನು ಏರ್ಪಡಿಸಿಕೊಂಡಿದ್ದಾರೆ. ಅನೇಕ

ಹೆಸರುಗಳಿಂದ ಅನೇಕ ಸಂಘಗಳು ಏರ್ಪಟ್ಟಿವೆ. ಮತವ್ಯಾಪ್ತಿಗೋಸ್ಕರ ಮುಸ್ಲಿಮ್‌ರಲ್ಲಿ ಯೂನಿವರ್ಸಲ್ ಇಸ್ಲಾಮಿಕ್ ರೀಸರ್ಚ್ ಸೆಂಟರ್, ಸತ್ಯ ತಿಳಿದಿದೆ, ಇಸ್ಲಾಮಿಕ್ ರಿಸರ್ಚ್ ಫರ್ ಹ್ಯುಮಾನಿಟಿ, ಧರ್ಮಪರಿಚಯ್ ಕಮಿಟಿ ಮೊದಲಾದ ಆಧ್ಯಾತ್ಮಿಕ ಸಂಘಗಳ ಹೆಸರುಗಳಿಂದ ಕೆಲವು ಸಂಘಗಳು ಏರ್ಪಟ್ಟಾಗ, ಮತರಕ್ಷಣೆಗೋಸ್ಕರ ಅಲ್‌ಖೈದಾ, ಇಸಿನ್, ಮುಜಾಹಿದ್ದೀನ್, ಲಷ್ಕರೆ ತೋಯಿಬಾ ಮೊದಲಾದ ಎಷ್ಟೋ ಉಗ್ರವಾದ ಸಂಸ್ಥೆಗಳು ತಯಾರಾಗಿವೆ. ಅವರ ಮತಕ್ಕೆ ವಿರುದ್ಧವಾಗಿರುವ ಅವರಿಂದ ಮತವನ್ನು ಕಾಪಾಡಿಕೊಳ್ಳುವುದಕ್ಕೆ ಉಗ್ರವಾದ ಸಂಸ್ಥೆಗಳು ಅವರನ್ನು ಸಾಯಿಸುವುದಕ್ಕೆ ಸಿದ್ಧವಾಗಿವೆ. ಅಂತಹ ಉಗ್ರವಾದ ಸಂಸ್ಥೆಗಳಲ್ಲಿ ಕೆಲಸಮಾಡುವವರನ್ನು ಆಕರ್ಷಿಸಿಕೊಳ್ಳುವುದಕ್ಕೆ ನಿನಗೆ ಬೋಧಿಸಿದಂತೆ ಬೋಧಿಸಿ, ಇತರ ಮತಸ್ಥರನ್ನು ಸಾಯಿಸುವುದಕ್ಕೆ ಪ್ರೋತ್ಸಾಹಿಸುತ್ತಿದ್ದಾರೆ. (ನಂತರ ಹೈದರಾಬಾದು ಬರುವುದರಿಂದ ನಮ್ಮ ಸಂಭಾಷಣೆ ಅಲ್ಲಿಗೆ ನಿಂತುಹೋಯಿತು.)

ಮುಸ್ಲಿಮ್ ಮತದಲ್ಲಿ ಮತವ್ಯಾಪಿಗೋಸ್ಕರ ಕೆಲವು ಸಂಘಗಳು ತಯಾರಾಗಿ ಕೇವಲ ದೈವಜ್ಞಾನವನ್ನು ಬೋಧಿಸುವುದಕ್ಕೆ ನಾವಿರುವುದೆಂದು ಹೇಳುತ್ತಾ ಕೊನೆಗೆ ಮತವನ್ನು ಪ್ರಚಾರ ಮಾಡುವುದೆ ಧ್ಯೇಯವಾಗಿ ಇಟ್ಟುಕೊಂಡಿದ್ದಾರೆ. ಮೊದಲು ದೇವರ ವಿಷಯವನ್ನು ಬೋಧಿಸಿ ನಂತರ ಕೊನೆಯಲ್ಲಿ ತಮ್ಮ ಮತಕ್ಕಿಂತ ಮೀರಿರುವುದು ಯಾವ ಮತವೂ ಇಲ್ಲವೆಂದು, ತಮ್ಮ ಮತದಲ್ಲಿರುವವರನ್ನೆ ದೇವರು ದಯ ತೋರಿಸುತ್ತಾನೆಂದು, ಆದ್ದರಿಂದ ಎಲ್ಲರೂ ತಮ್ಮ ಮತದಲ್ಲಿ ಸೇರಿ ದೇವರಿಗೆ ಹತ್ತಿರದವರು ಆಗಿರೆಂದು ಹೇಳುತ್ತಿರುತ್ತಾರೆ. ಮುಸ್ಲಿಮ್ ಮತದಲ್ಲಿ ಒಂದುಕಡೆ ಮತ ಪ್ರಚಾರ, ಮತ್ತೊಂದು ಕಡೆ ಮತರಕ್ಷಣೆ ಎರಡೂ ಮಾಡುವವರಿರುವಾಗ, ಕ್ರೈಸ್ತ ಮತದಲ್ಲಿ ಕೇವಲ ಮತ ಪ್ರಚಾರವನ್ನೆ ಹೆಚ್ಚಾಗಿ ಮಾಡುತ್ತಿದ್ದಾರೆ. ಮತರಕ್ಷಣೆ ಕಾರ್ಯಗಳು ಎಲ್ಲಿಯೂ ಕಾಣಿಸುತ್ತಿಲ್ಲ. ಕ್ರೈಸ್ತರಲ್ಲಿ ಎಷ್ಟೋ ಆಧ್ಯಾತ್ಮಿಕ ಸಂಘಗಳು ಏರ್ಪಟ್ಟು ಅದೇ ಕೆಲಸವಾಗಿ ಮತಪ್ರಚಾರವನ್ನು ಮಾಡುತ್ತಿವೆ. ಈ ವಿಧವಾಗಿ ಕ್ರೈಸ್ತರು ಮತಪ್ರಚಾರವೆಂಬ ಒಂದೇ ವಿಧಾನವನ್ನು ಅನುಸರಿಸುತ್ತಿರುವಾಗ, ಹಿಂದೂಗಳು ಸಹ ಮತರಕ್ಷಣೆ ಎಂಬ ಒಂದೇ

ವಿಧಾನವನ್ನು ಅನುಸರಿಸುತ್ತಿದ್ದಾರೆ. ಮತರಕ್ಷಣೆ ಮುಸ್ಲಿಮರಲ್ಲಿ ಇರುವಾಗ, ಅದರಲ್ಲಿ ಕೆಲವು ಉಗ್ರವಾದ ಸಂಸ್ಥೆಗಳು ತಯಾರಾಗಿ, ಪವಿತ್ರ ಯುದ್ಧ ಎಂದು ಹೆಸರಿಟ್ಟು ಮುಸ್ಲಿಮ್ ಮತಕ್ಕೆ ವಿರುದ್ಧವಾಗಿರುವವರನ್ನು ಸಾಯಿಸುವುದೆ ಮುಖ್ಯವಾದ ಕೆಲಸವಾಗಿ ಇಟ್ಟುಕೊಂಡಿದ್ದಾರೆ. ಹಿಂದೂಗಳಲ್ಲಿ ಅವರ ಮತವನ್ನು ರಕ್ಷಿಸಿಕೊಳ್ಳುವ ಕಾರ್ಯದಲ್ಲಿ ಮುಸ್ಲಿಮ್‌ರಂತೆ ಪ್ರವರ್ತಿಸುತ್ತಿದ್ದಾರೆ. ಹಿಂದೂಗಳಿಗೆ ಉಗ್ರವಾದಿಗಳೆಂಬ ಹೆಸರಿಲ್ಲ ಆದರೆ, ಹೆಚ್ಚು ಕಡಿಮೆ ಹಾಗೆಯೇ ಮಾಡುತ್ತಿದ್ದಾರೆ. ಮುಸ್ಲಿಮ್‌ರು ಇತರ ಮತದವರನ್ನು ಕಂಡುಹಿಡಿದು, ಅವರನ್ನು ಮಾತ್ರ ಸಾಯಿಸುವುದರಿಂದ ಕೊನೆಗೆ ತಮ್ಮ ಮತ ಬಲವಾದುದಾಗುತ್ತದೆಂದು ಅವರ ನಂಬಿಕೆ. ಆದ್ದರಿಂದ ಮುಸ್ಲಿಮ್‌ರು ಹಿಂದೂಗಳ ಮೇಲೆ, ಕ್ರೈಸ್ತರ ಮೇಲೆ ದಾಳಿಮಾಡಿ ಸಾಯಿಸುತ್ತಿರುವುದು ಪ್ರಪಂಚವ್ಯಾಪ್ತವಾಗಿ ನಡೆಯುತ್ತಿದೆ. ಆದರೆ ಹಿಂದೂಗಳು ಸಹ ತಮ್ಮ ಮತವ್ಯಾಪ್ತಿಯನ್ನು ಮಾಡಲಿಲ್ಲವಾಗಲಿ, ಮತರಕ್ಷಣೆ ವಿಷಯದಲ್ಲಿ ಕೆಲವು ಸಂಘಗಳಾಗಿದ್ದೂ, ಪರಮತವನ್ನು ಪ್ರಚಾರ ಮಾಡುವವರನ್ನು ಪ್ರಚಾರ ಮಾಡದಂತೆ ತಡೆಯಬೇಕೆಂಬುದೆ ಮುಖ್ಯ ಉದ್ದೇಶವಾಗಿ ಇಟ್ಟು ಕೊಂಡಿದ್ದಾರೆ. ಪರಮತ ಪ್ರಚಾರವನ್ನು ನಿರೋಧಿಸುವುದರಲ್ಲಿ ಕೆಲವುಕಡೆ ಘರ್ಷಣೆ ಬೀಳಬೇಕಾಗಿ ಬರುತ್ತಿದೆ. ಕೆಲವು ಕಡೆ ಸಾಯಿಸಿಕೊಳ್ಳಬೇಕಾಗುತ್ತದೆ.

| | | | | | | |
|---|---|---|---|---|---|---|
| 1) | **ಮುಸ್ಲಿಮ್‌ರು** | – | **ಮತಪ್ರಚಾರ** | – | **ಮತರಕ್ಷಣೆ** |
| 2) | **ಕ್ರೈಸ್ತರು** | – | **ಮತಪ್ರಚಾರ** | – | – |
| 3) | **ಹಿಂದೂಗಳು** | – | – | – | **ಮತರಕ್ಷಣೆ** |

ಮೇಲಿನ ವಿಧವಾಗಿ ಮೂರು ಮತದವರಿದ್ದಾರೆಂದು ತಿಳಿಯುತ್ತಿದೆ. ಆದರೆ ಇಲ್ಲಿ ಗಮನಿಸಬೇಕಾದ ವಿಷಯವೊಂದಿದೆ. ಅದೇನೆಂದರೆ! ಆದಿಯಿಂದ ಇರುವುದು ಇಂದೂ ಸಮಾಜವೆ ಆದರೂ ಕಲಿಯುಗದಲ್ಲಿ ಎರಡುಸಾವಿರ (2000) ವರ್ಷಗಳ ಕೆಳಗೆ ಕ್ರೈಸ್ತಮತ ಹುಟ್ಟಿದಾಗ ಅಲ್ಲಿಯವರೆಗು ಇಂದೂ ಸಮಾಜವಾಗಿರುವ ಇಂದೂಗಳು ಆಗಿನಿಂದ ಇಂದೂಮತವಾಗಿ ಕರೆಯಲ್ಪಟ್ಟಿದ್ದಾರೆ. ನಂತರ ಇಲ್ಲಿಗೆ ಹದಿನಾಲ್ಕುನೂರು (1400) ವರ್ಷಗಳ ಕೆಳಗೆ ಮುಸ್ಲಿಮ್ ಮತ

ಹುಟ್ಟಿದಾಗ ಇಂದೂಮತ ಸ್ವಲ್ಪ ಹಿಂದೂ ಮತವಾಗಿ ಬದಲಾವಣೆಹೊಂದಿ ಆಗಿನಿಂದ ಹಿಂದೂಮತವಾಗಿ ಕರೆಯಲ್ಪಡುತ್ತಿದೆ. ('ಹಿಂದೂ' ಎನ್ನುವ ಪದವನ್ನು ಕುರಿತು ಒಬ್ಬ ಸ್ವಾಮೀಜಿ ಅಭಿಪ್ರಾಯ)

## "ಹಿಂದೂ" ಪದದ ಮೇಲೆ

**ಶ್ರೀ ಪುಷ್ಪಗಿರಿ ಮಾಸಂಸ್ಥಾನ್ ಪೀಠಾಧಿಪತಿ ಶ್ರೀ ವಿದ್ಯಾ ನೃಸಿಂಹಭಾರತಿ ಸ್ವಾಮಿ ಅವರ ಅಭಿಪ್ರಾಯ (ಭಕ್ತಿ ಟಿವಿ ಛಾನಲ್‌ಗಳಲ್ಲಿ "ಭಕ್ತಿ ಧಾರ್ಮಿಕ ಸಮ್ಮೇಳನ" ಕಾರ್ಯಕ್ರಮ ಸಂದರ್ಭವಾಗಿ)**

**(ಈ ಭಾರತದೇಶದಲ್ಲಿನ ಸಂಸ್ಕೃತಿ, ಭಾರತೀಯ ಸಂಸ್ಕೃತಿ, ಈ ಹಿಂದೂ ಅನ್ನುವಂತಹ ಹೆಸರು, ಎಲ್ಲಿಂದ ಬಂದಿದೆ, ಹೇಗೆ ಬಂದಿದೆ ಎಂದರೆ ತುರುಷ್ಕರು ನಮ್ಮ ದೇಶವನ್ನು ಪರಿಪಾಲಿಸುವ ಸಮಯದಲ್ಲಿ ಅವರು ನಮಗೆ ಕೊಟ್ಟಿರುವಂತಹ ಬಿರುದು "ಹಿಂದೂವೆಂದು." Old Persian dictionary ಎನ್ನುವುದರಲ್ಲಿ "ಹಿಂದ್" ಎನ್ನುವಂಥಹ ಶಬ್ದವನ್ನು ವಿವರಣೆ ಕೊಡುತ್ತಾ "ಹಿಂದ್" ಅಂದರೆ "ಬೆವಕೂಫ್", "ಚೋರ್". ಇದು ನಮ್ಮೊಂದರ ಘನತೆ, ನಮಗೆ ಅವರು ಇಟ್ಟಿರುವಂತಹ ಮುದ್ದಾದ ಹೆಸರು "ಹಿಂದ್" ಎಂಬ ಹೆಸರು. ಬಹಳ ಮುದ್ದಾಗಿ ಇಟ್ಟಿದ್ದಾರೆ ಅವರು. ನಾವು ಆನಂದವಾಗಿ ಸ್ವೀಕಸಿದ್ದೇವೆ. ಅದನ್ನೆ ನಾವು, ನಿರಂತರ ನಮ್ಮನ್ನು ನಾವು ಹೇಳಿಕೊಳ್ಳುತ್ತಾ ಇದ್ದೇವೆ. ಎಲ್ಲಿ application ಇಡಬೇಕಾಗಿ ಬಂದರು what is your religion ಎಂದು ಅಂದರೆ ಹಿಂದ್, ಹಿಂದೂ, ನಾನು ಇಂಡಿಯನ್‌ನು, ಹಿಂದೂವು ಎಂದು ಹೇಳಿಕೊಳ್ಳುತ್ತಿದ್ದೇವೆ. ಆದರೆ ನಾವು ಹಿಂದೂಗಳು ಅಲ್ಲ, ನಾವು ಭಾರತೀಯರು.)**

ಎಲ್ಲದಕ್ಕಿಂತ ಮೊದಲು ಹುಟ್ಟಿರುವುದು ಹಿಂದೂಮತವೆ ಆದರೂ, ಹಿಂದೂ ಮತದ ನಂತರ ಹುಟ್ಟಿದ ಕ್ರೈಸ್ತ, ಮುಸ್ಲಿಮ್ ಮತಗಳು ಹಿಂದೂ ಮತಕ್ಕಿಂತ ಹೆಚ್ಚಾಗಿ ಕ್ರಮಶಿಕ್ಷಣ ಹೊಂದಿವೆ. ಕ್ರಮಶಿಕ್ಷಣದ ಎಲ್ಲದಕ್ಕಿಂತ ಮುಂದಿರುವುದು ಮುಸ್ಲಿಮ್ ಮತ. ನಂತರ ಎರಡನೆ ಸ್ಥಾನದಲ್ಲಿರುವುದು ಕ್ರೈಸ್ತಮತ.

ಇನ್ನುಹೋದರೆ ಎಲ್ಲದಕ್ಕಿಂತ ಮೊದಲು ಹುಟ್ಟಿದ ಹಿಂದೂಮತದಲ್ಲಿ ಕ್ರಮಶಿಕ್ಷಣ ಸ್ವಲ್ಪವೂ ಇಲ್ಲದಹಾಗೆ ಹೋಗಿದೆ. ಕೃತಯುಗ, ತ್ರೇತಾಯುಗ, ದ್ವಾಪರಯುಗಗಳಲ್ಲಿ ಎಷ್ಟೋ ಕ್ರಮಶಿಕ್ಷಣದಿಂದ ಇರುವ ಇಂದೂಸಮಾಜ ಕಲಿಯುಗದ ಮೊದಲಿನಲ್ಲಿ 3000 ವರ್ಷಗಳ ನಂತರ ಹಿಂದೂಮತವಾಗಿ ಬದಲಾಗಿಹೋಗಿ ಆಗಿನಿಂದ ಸ್ವಲ್ಪವೂ ಕ್ರಮಶಿಕ್ಷಣ ಇಲ್ಲದ ಮತವಾಗಿ ತಯಾರಾಗಿದೆ.

ಪೂರ್ವದಲ್ಲಿ ಕೃತಯುಗದಿಂದ ದ್ವಾಪರಯುಗದವರೆಗು ಇಂದೂ ಸಮಾಜ ಎಷ್ಟೋ ಕ್ರಮಶಿಕ್ಷಣಂದ ಇತ್ತೆಂದು ಹೇಳಿಕೊಂಡಿದ್ದೇವೆ ಅಲ್ಲವೆ! ಹಾಗೆ ಇರುವುದಕ್ಕೆ ಕಾರಣ ಏನೆಂದರೆ! ಆ ಕಾಲದಲ್ಲಿ ಗುರು ಎಂಬ ಒಬ್ಬ ವ್ಯಕ್ತಿ ಅಧೀನದಲ್ಲಿ ಇಂದೂಸಮಾಜವೆಲ್ಲವೂ ಇದ್ದು ಗುರುವೊಂದರ ಆದೇಶಾನುಸಾರ ಎಲ್ಲರೂ ನಡೆದುಕೊಳ್ಳುತ್ತಿದ್ದರು. ಗುರು ಆಜ್ಞೆಯನ್ನು ಜವದಾಟುವವರಲ್ಲ. ಆದ್ದರಿಂದ ಎಲ್ಲರೂ ಕ್ರಮಶಿಕ್ಷಣದಿಂದ ಇರುತ್ತಿದ್ದರು. ಕೃತಯುಗದಿಂದ ದ್ವಾಪರಯುಗ ಕೊನೆಯುವರೆಗು, ಭಾರತದೇಶದಲ್ಲಿನ ಇಂದೂತ್ವ ಎಂದರೆ ಉಳಿದ ದೇಶದೊಳಗಿನವರು ಸಹ ಎಷ್ಟೋ ಗೌರವವಾಗಿ ನೋಡುತ್ತಿದ್ದರು. ಆ ಕಾಲದಲ್ಲಿ ಅತ್ಯುನ್ನತವಾದ ಆಧ್ಯಾತ್ಮಿಕ ಭಾರತದೇಶದಲ್ಲಿನ ಇಂದೂಗಳಲ್ಲಿ ಇರುತ್ತಿತ್ತು. ಆ ಕಾಲದಲ್ಲಿ ಸ್ವಲ್ಪ ಪ್ರಾಂತಕ್ಕೆಲ್ಲಾ ಒಬ್ಬ ರಾಜನು ಇರುತ್ತಿದ್ದನು. ಅಂತಹ ಕೆಲವು ಪ್ರಾಂತಗಳ ರಾಜರೆಲ್ಲರೂ ಒಬ್ಬ ಚಕ್ರವರ್ತಿ ಕೆಳಗೆ ಪಾಲನೆಸಾಗಿಸುತ್ತಿದ್ದರು. ಆ ಕಾಲದಲ್ಲಿ ಭಾರತದೇಶದಲ್ಲಿನ ಎಷ್ಟೋ ಪ್ರಾಂತಗಳಿಗೆ ಎಷ್ಟೋ ಜನ ರಾಜರಿರುವಾಗ, ಭಾರತದೇಶಕ್ಕೆಲ್ಲಾ ರಾಜರಿಗೆಲ್ಲ ರಾಜನಾದ ಒಬ್ಬ ಚಕ್ರವರ್ತಿ ಇರುತ್ತಿದ್ದನು. ರಾಜರಿಗೆ ಅವರ ಸ್ಥಾನವನ್ನು ತಿಳಿಸುವಂತೆ, ಈತನು ರಾಜ ಎನ್ನುವಂತೆ ಅವರಿಗೆ ತಲೆಮೇಲೆ ಕಿರೀಟಗಳಿರುತ್ತಿದ್ದವು. ಪ್ರತಿರಾಜನು ಚಿಕ್ಕದೋ, ದೊಡ್ಡದೋ ಕಿರೀಟವನ್ನು ಧರಿಸಿ ಸಭೆಗೆ ಹಾಜರಾಗುತ್ತಿದ್ದರು. ಕಿರೀಟ ಎಂದರೆ ತಲೆಗೆ ಧರಿಸುವುದು, ಮುಂದಿನ ಭಾಗದಲ್ಲಿ ಕಿರೀಟವು ಅಲಂಕಾರವಾಗಿ ತಯಾರು ಮಾಡಲ್ಪಟ್ಟಿರುತ್ತದೆ. ಬಹುಷಾ ಪೌರಾಣಿಕ ಸಿನಿಮಾಗಳಲ್ಲಾಗಲಿ, ಡ್ರಾಮಾಗಳಲ್ಲಾಗಲಿ ಎಲ್ಲಾ ರಾಜ ಧರಿಸಿದ ಕಿರೀಟಗಳನ್ನು ನೋಡಿಯೆ ಇರುತ್ತಾರೆ. ಆದರೆ ರಾಜ

ಒಂದು ಪ್ರಾಂತಕ್ಕೆ ಅಧಿಪತಿಯಾಗಿದ್ದು, ಚಕ್ರವರ್ತಿ ದೇಶಕ್ಕೆಲ್ಲಾ, ಎಲ್ಲಾ ಪ್ರಾಂತಗಳಿಗೂ ಅಧಿಪತಿಯಾಗಿದ್ದೂ, ರಾಜರೆಲ್ಲರಿಗೂ ರಾಜನಾಗಿರುತ್ತಾನೆ. ಆದ್ದರಿಂದ ಚಕ್ರವರ್ತಿಯ ಕಿರೀಟ ರಾಜರ ಕಿರೀಟಕ್ಕಿಂತ ಪ್ರತ್ಯೇಕವಾಗಿ ನೋಡುತ್ತಲೇ ಗಮನಿಸುವಂತೆ ಇರುತ್ತದೆ. ರಾಜರ ಕಿರೀಟಕ್ಕೆ ಮುಂದಿನ ಭಾಗದಲ್ಲಿ ಮಾತ್ರ ಅಲಂಕಾರವಿರುವಾಗ, ಚಕ್ರವರ್ತಿ ಕಿರೀಟಕ್ಕೆ ಮುಂದೆ, ಹಿಂದೆ ಎರಡು ಭಾಗಗಳಲ್ಲಿಯೂ ಅಲಂಕಾರವಿರುತ್ತದೆ. ಮುಖ್ಯವಾಗಿ ಈತನು ಚಕ್ರವರ್ತಿಯೆಂದು ತಿಳಿಯುವಂತೆ, ಆತನು ಧರಿಸುವ ಕಿರೀಟಕ್ಕೆ ಹಿಂದಿನ ಭಾಗದಲ್ಲಿ ಒಂದು ಚಕ್ರವನ್ನು ಅಳವಡಿಸಿರುವುದನ್ನು ಗಮನಿಸಬಹುದು. ಅಂತಹ ಚಕ್ರವಿರುವ ಕಿರೀಟವನ್ನು ಆಧ್ಯಾತ್ಮಿಕದಲ್ಲಿ ರಾರಾಜು ಅದ ಗುರುವಿನಿಂದ ಚಕ್ರವರ್ತಿಗಳು ಹೊಂದಿರುತ್ತಿದ್ದರು.

ಕೆಲವರಿಗೆ ಇಲ್ಲೊಂದು ಪ್ರಶ್ನೆ ಬರಬಹುದು. ಅದೇನೆಂದರೆ! ಚಕ್ರವರ್ತಿಯ ಕಿರೀಟದ ಹಿಂದೆ ಚಕ್ರವನ್ನು ಏಕೆ ಇಡುತ್ತಿದ್ದಾರೆ? ಚಕ್ರವಿರುವ ಕಿರೀಟವನ್ನು ಇಟ್ಟು ಚಕ್ರವರ್ತಿ ಎನ್ನುವುದರಲ್ಲಿ ಅರ್ಥವೇನಿದೆ? ಎಂದು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಉತ್ತರ ಈ ವಿಧವಾಗಿದೆ. ಚಕ್ರವಿರುವ ಕಿರೀಟವನ್ನು ಸಂಪ್ರದಾಯದ ಪ್ರಕಾರ ಯೋಗಿಗಳು ಧರಿಸಬೇಕು. ಯೋಗಿ ಒಂದುಬಾರಿ ಧರಿಸಿದರೂ ಕಿರೀಟಕ್ಕೆ ಅರ್ಥ ಪೂರ್ತಿಯಾಗುತ್ತದೆ. ನಂತರ ಆ ಚಕ್ರವನ್ನು ರಾರಾಜರು ಧರಿಸುವುದು ಆನವಾಯಿತಿ ಇದೆ. ಒಂದುಬಾರಿ ಯೋಗಿ ಧರಿಸಿದಾಗ ಯೋಗಿ ತಲೆಯಲ್ಲಿರುವ ಆತ್ಮಶಕ್ತಿ ಇಲ್ಲವೆ ಜ್ಞಾನಶಕ್ತಿ ಕಿರೀಟದಲ್ಲಿ ಸ್ವಲ್ಪವಾದರು ಸೇರುವಂತೆ ಯೋಗಿಗಳು ಸಂಕಲ್ಪ ಮಾಡುತ್ತಾರೆ. ಯೋಗಿ ಧರಿಸಿದಾಗ ಕಿರೀಟ ಹಿಂದಿರುವ ಚಕ್ರದೊಳಗೆ ಜ್ಞಾನಶಕ್ತಿ ಸೇರುವುದು ನಡೆಯುತ್ತಿದೆ. ನಂತರ ರಾರಾಜು ಧರಿಸಿದಾಗ ಆತನ ತಲೆಯಲ್ಲಿನ ಆತ್ಮಬುದ್ಧಿಯೆಂಬ ಚಕ್ರವನ್ನು ತಿರುವಿ ಸಾಮ್ರಾಜ್ಯಪಾಲನೆ ಸಕ್ರಮವಾಗಿ ಸಾಗುವಂತೆ ಮಾಡುತ್ತಾನೆಂದು ಅವರ ನಂಬಿಕೆ. ಎಲ್ಲರತಲೆಯಲ್ಲಿ ಆತ್ಮಯಿದ್ದು ಅವರಹಿಂದೆ ಕರ್ಮಚಕ್ರವನ್ನು ತಿರುಗಿಸುತ್ತಾ, ಮನುಷ್ಯರೆಲ್ಲರನ್ನು ಆಡಿಸುತ್ತಿದೆಂದು ತಿಳಿಯುವಂತೆ, ಕಿರೀಟದಲ್ಲಿ ಹಿಂದಿನ ಭಾಗದಲ್ಲಿ ಚಕ್ರವನ್ನಿಡುವುದು ನಡೆದಿದೆ.

ಸಾಧಾರಣ ಮನುಷ್ಯನನ್ನು ಸಹಾ ತಲೆ ಹಿಂದೆ ಇದ್ದು ಆತ್ಮ ಆಡಿಸುತ್ತಿದೆಂಬ ಅರ್ಥ ಇದೆಯೆಂದು ಕಿರೀಟದಲ್ಲಿ ಚಕ್ರವನ್ನು ಹಿಂದೆಯೆ ಇಟ್ಟಿದ್ದಾರೆ. ಅಂತಹ ಕಿರೀಟದಲ್ಲಿನ ಚಕ್ರದಲ್ಲಿ ಯೋಗಿಗಳ ತಲೆಯಲ್ಲಿನ ಆತ್ಮಶಕ್ತಿ ಪ್ರವೇಶಿಸಿ, ರಾರಾಜನನ್ನು ಸಹಾ ಆಪತ್ತುಗಳಲ್ಲಿ ಆ ಶಕ್ತಿ ಕಾಪಾಡುತ್ತದೆಂದು, ಸಾಮ್ರಾಜ್ಯವನ್ನು ಸಕ್ರಮವಾಗಿ ಪಾಲಿಸುತ್ತಾನೆಂದು  ಆ ದಿನಗಳಲ್ಲಿ ಎಲ್ಲರ ಭಾವ ಇರುತ್ತಿತ್ತು.

ಕಾಲ ಕಳೆದಂತೆಲ್ಲಾ ರಾಜರು ಹೋಗಿದ್ದಾರೆ, ರಾರಾಜರು ಹೋಗಿದ್ದಾರೆ, ಕಿರೀಟಗಳು ಹೋಗಿವೆ. ಕಿರೀಟವನ್ನು ಧರಿಸುವ ಚಕ್ರವರ್ತಿಗಳ ಭಾವನೆ ಹೋಗಿದೆ. ಈಗಿನಕಾಲದಲ್ಲಿ ಎಲ್ಲಿಯಾದರೂ ಪೌರಾಣಿಕ ಸಿನಿಮಾಗಳಲ್ಲಿಯೊ ಇಲ್ಲವೆ ನಾಟಕಗಳಲ್ಲಿಯೋ ರಾಜರ ವೇಷಧಾರಣೆ ಧರಿಸಿದವರನ್ನು ನೋಡಬಹುದು. ಮಹಾಭಾರತಕ್ಕೆ ಸಂಬಂದಿಸಿದ ಚಲನಚಿತ್ರದಲ್ಲಿ ರಾರಾಜನಾಗಿ ಆಂದಿನ ದುರ್ಯೋಧನನು ಇರುತ್ತಿದ್ದನು. ದುರ್ಯೋಧನನು ಆದಿನದ ಚಕ್ರವರ್ತಿ ಆದ್ದರಿಂದ, ಆತನ ತಲೆಮೇಲೆ ಚಕ್ರವಿರುವ ಕಿರೀಟವನ್ನು ನೋಡಬಹುದು. ದುರ್ಯೋಧನ ಚಕ್ರವರ್ತಿ ಕೆಳಗೆ ಸಾಮಂತ ರಾಜರಾಗಿ ಕೆಲಸಮಾಡುವವರು ಚಕ್ರವಿಲ್ಲದ ಕಿರೀಟವನ್ನು ಧರಿಸಬೇಕು. ಆದರೆ ಚಕ್ರವರ್ತಿ ಧರಿಸುವ ಕಿರೀಟಕ್ಕೆ, ರಾಜರು ಧರಿಸುವ ಕಿರೀಟಕ್ಕೆ ವ್ಯತ್ಯಾಸ ತಿಳಿಯದವರು ನಾಟಕಗಳಲ್ಲಿ, ಸಿನಿಮಾಗಳಲ್ಲಿ ಎಲ್ಲರಿಗೂ ಒಂದೇ ವಿಧವಾದ ಕಿರೀಟವನ್ನು ಧರಿಸುತ್ತಿದ್ದಾರೆ. ರಾರಾಜನಾದ ದುರ್ಯೋಧನನಿಗೆ, ದುರ್ಯೋಧನನ ಪಕ್ಕದಲ್ಲಿರುವ ಕರ್ಣನಿಗು ಚಕ್ರವಿರುವ ಕಿರೀಟವನ್ನೆ ಧರಿಸುತ್ತಿದ್ದಾರೆಂದರೆ ಕಿರೀಟದಲ್ಲಿನ ಚಕ್ರವೊಂದರ ಬೆಲೆ ಈಗಿನ ಪ್ರಜೆಗಳಿಗೆ ಅರ್ಥವಾಗಿಲ್ಲವೆಂದು ತಿಳಿಯುತ್ತಿದೆ. ಇಲ್ಲಿ ಚರಿತ್ರೆ ತಿಳಿದವರು ನನ್ನನ್ನು ಒಂದು ಪ್ರಶ್ನೆ ಕೇಳಬಹುದು. ಅದೇನೆಂದರೆ!

ಕೃಷ್ಣನು ಕನಿಷ್ಟ ಒಂದು ರಾಜ್ಯಕ್ಕೂ ಸಹ ರಾಜನು ಅಲ್ಲ! ಕೃಷ್ಣನ ಅಣ್ಣನಾದ ಬಲರಾಮನು ಮಧುರ ರಾಜ್ಯಕ್ಕೆ ರಾಜನಾಗಿರುತ್ತಿದ್ದನು. ಕೃಷ್ಣನು ಅಣ್ಣನ ಕೆಳಗೆ ತಮ್ಮನಾಗಿದ್ದು ಯಾವಾಗಲೂ ರಾಜ್ಯಪಾಲನ ವಿಷಯವನ್ನು ನೋಡಲಿಲ್ಲ. ಅಂತಹ ಕೃಷ್ಣನು ತನ್ನ ಕಿರೀಟದಲ್ಲಿ ಚಕ್ರವನ್ನು ಧರಿಸಿದಂತೆ ಈ

ದಿನ ಸಹ ಆತನ ಬೊಂಬೆಗಳಲ್ಲಿ ಕಾಣಿಸುತ್ತಿದೆ. ರಾಜು ಅಲ್ಲ, ರಾರಾಜು ಅಲ್ಲ, ಅಂತಹ ಕೃಷ್ಣನು ಚಕ್ರವಿರುವ ಕಿರೀಟವನ್ನು ಧರಿಸಬಹುದಾ? ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ಕೃಷ್ಣನು ಸಾಮಾನ್ಯ ಮನುಷ್ಯನಲ್ಲ. **ಆತನು ಆಧ್ಯಾತ್ಮಿಕಶಕ್ತಿಗೆ ಕೇಂದ್ರವಾಗಿರುವ ವ್ಯಕ್ತಿ, ಆದ್ದರಿಂದ ಆಧ್ಯಾತ್ಮಿಕ ಸಾಮ್ರಾಜ್ಯಕ್ಕೆ ನಾನು ರಾರಾಜನು ಎನ್ನುವಂತೆ, ಎಲ್ಲರಿಗೂ ತಿಳಿಯುವಂತೆ ಕೃಷ್ಣನು ಚಕ್ರವಿರುವ ಕಿರೀಟವನ್ನು ಧರಿಸಿದ್ದಾನೆ. ಕೃಷ್ಣನು ಆಧ್ಯಾತ್ಮಿಕ ಚಕ್ರವರ್ತಿ ಎನ್ನುವುದರಲ್ಲಿ ಸಂಶಯಗಳೇ ಇಲ್ಲದಂತೆ ಭಗವದ್ಗೀತೆಯನ್ನು ಸಹ ಬೋಧಿಸಿದ್ದಾನೆ. ಆದ್ದರಿಂದ ಎಲ್ಲಾ ವಿಧಗಳು ಕೃಷ್ಣನು ಚಕ್ರವಿರುವ ಕಿರೀಟವನ್ನು ಧರಿಸುವುದರಲ್ಲಿ ಆರ್ಹನು.** ಆಧ್ಯಾತ್ಮಿಕ ಶಕ್ತಿ ಇರುವವರೆ ಹಾಗೆ ಧರಿಸುವುದಕ್ಕೆ ಯೋಗ್ಯರು. ಪೂರ್ವದಲ್ಲಿ ಆಧ್ಯಾತ್ಮಿಕ ಶಕ್ತಿ ಇಲ್ಲದವರು ದೇವತೆಗಳು ಸಹಿತವು ಚಕ್ರವಿರುವ ಕಿರೀಟವನ್ನು ಧರಿಸುವವರು ಅಲ್ಲ. ಆತ್ಮಶಕ್ತಿ ಇಲ್ಲದ ದೇವತಾ ಪ್ರತಿಮೆಗಳಿಗು ಸಹ ಪೂರ್ವದಲ್ಲಿ ಸಾಧಾರಣ ಕಿರೀಟಗಳನ್ನೆ ಧರಿಸುತ್ತಿದ್ದರು. ಈಗಲೂ ಕೆಲವು ದೇವಾಲಯಗಳಲ್ಲಿ ದೇವತೆಗಳಿಗೆ ಚಕ್ರವಿಲ್ಲದ ಕಿರೀಟವನ್ನು ಸಂಪ್ರದಾಯದ ಪ್ರಕಾರ ಧರಿಸುವುದು ಗಮನಿಸಬಹುದು. ತಿರುಮಲದಲ್ಲಿನ ವೆಂಕಟೇಶ್ವರಸ್ವಾಮಿಗೂ ಸಹ ಸಂಪ್ರದಾಯದ ಪ್ರಕಾರ ಚಕ್ರವಿಲ್ಲದ ಕಿರೀಟವನ್ನು ಧರಿಸುವುದು ಈಗಲೂ ನಾವು ನೋಡಬಹುದು. ಈ ಸಂಪ್ರದಾಯವೇನೊ ಪೂರ್ವದಲ್ಲಿ ಎಲ್ಲರಿಗೂ ತಿಳಿದಿರುತ್ತಿತ್ತು. ಈದಿನ ಯಾರಿಗೂ ತಿಳಿಯದಹಾಗೆ ಹೋಗಿದೆ. ಕಿರೀಟ ಖರೀದಾದುದು ಆಗಿರಬಹುದು, ಆಗದಿರಬಹುದು. ಕಿರೀಟ ಸಂಪ್ರದಾಯದ ಪ್ರಕಾರ ಇದೆಯಾ, ಇಲ್ಲವಾಯೆಂದು ನೋಡಬೇಕು. ಕಿರೀಟ ಆಧ್ಯಾತ್ಮಿಕ ಭಾವನೆಗೆ ಸಂಬಂಧಿಸಿರುವುದೆಯಾಗಲಿ ಪ್ರಪಂಚಕ್ಕೆ ಸಂಬಂಧಿಸಿರುವುದು ಅಲ್ಲವೆಂದು ತಿಳಿಯಬೇಕು.

ಒಬ್ಬ ಚಕ್ರವರ್ತಿ ಹೊಸದಾಗಿ ಪಟ್ಟಾಭಿಷಿಕ್ತನಾದ ದಿನ ಅಂದರೆ ಸಿಂಹಾಸನವನ್ನು ಏರಿದದಿನ, ರಾಜರಿಗೆಲ್ಲ ರಾಜನಾಗಿ, ರಾರಾಜನಾಗಿ ಬಾಧ್ಯತೆಗಳನ್ನು ಸ್ವೀಕರಿಸಿದ ದಿನ, ಆಧ್ಯಾತ್ಮಿಕದಲ್ಲಿ ರಾರಾಜನಾದ ಗುರುವು ಚಕ್ರವರ್ತಿಗೆ ತನ್ನ ಕೈಗಳಿಂದ ಕಿರೀಟವನ್ನು ಇಡುತ್ತಾನೆ. ಅದು ಚಕ್ರವರ್ತಿಗಳ

ಸಂಪ್ರದಾಯ. ಗುರುವು ಕಿರೀಟವನ್ನು ಧರಿಸದೆ ಯಾರೂ ಭೂಮಿಮೇಲೆ ಚಕ್ರವರ್ತಿ ಆಗುವುದಕ್ಕೆ ಸಾಧ್ಯವಿಲ್ಲ. ಈ ವಿಧವಾಗಿ ಆ ದಿನದ ಸಂಪ್ರದಾಯ ಎಷ್ಟೋ ಕ್ರಮಶಿಕ್ಷಣದಿಂದ ಕೂಡಿಕೊಂಡಿರುತ್ತಿತ್ತು. ಭೂಮಿಮೇಲೆ ಕಿರೀಟವನ್ನು ಧರಿಸುವ ಯೋಗ್ಯತೆ ಇರುವವನು ಗುರು ಮಾತ್ರವೆ. ಕಾಣಿಸದ ಸಾಮ್ರಾಜ್ಯಕ್ಕೆ ಅಂದರೆ ಆಧ್ಯಾತ್ಮಿಕ ಸಾಮ್ರಾಜ್ಯಕ್ಕೆ ರಾರಾಜು ಗುರುವು ಮಾತ್ರವೆ. ದೇಶದಲ್ಲಿ ಎಷ್ಟೋ ಜನ ಬೋಧಕರಿದ್ದರೂ ದೇಶದಲ್ಲಿನ ಬೋಧಕರೆಲ್ಲರಿಗೂ ಗುರುವು ಮಾತ್ರ ಒಬ್ಬನೇ ಇರುತ್ತಿದ್ದನು. ಈ ವಿಧವಾಗಿ ಆದಿನ ಆಧ್ಯಾತ್ಮಿಕದಲ್ಲಿ ಸಹ ಎಷ್ಟೋ ಕ್ರಮಶಿಕ್ಷಣ ಇರುತ್ತಿತ್ತು.

ಚಿಕ್ಕರಾಜನು ಪಾಲಿಸುವ ಪ್ರಾಂತ್ಯವನ್ನು ರಾಜ್ಯ ಎನ್ನುತ್ತಿದ್ದರು. ಹಾಗೆಯೇ ಎಷ್ಟೋ ರಾಜ್ಯಗಳನ್ನು ಪಾಲಿಸುವ ಚಕ್ರವರ್ತಿ ಅಧೀನದಲ್ಲಿರುವ ದೇಶವನ್ನು ಸಾಮ್ರಾಜ್ಯ ಎಂದು ಕರೆಯುತ್ತಿದ್ದರು. ಸಾಮ್ರಾಜ್ಯಗಳು ಎರಡು ವಿಧಗಳು ಇವೆ. ಅದರಲ್ಲಿ ಒಂದು ಸ್ಥೂಲವಾಗಿ ಕಾಣಿಸುವ ಭೂಮಿ ಇರುವ ಸಾಮ್ರಾಜ್ಯ. ಎರಡನೆಯದು ಕಾಣಿಸದೆ ಸೂಕ್ಷ್ಮವಾಗಿರುವ ಆಧ್ಯಾತ್ಮಿಕ ಸಾಮ್ರಾಜ್ಯ. ಹೊರಗೆ ಕಾಣಿಸುವ ಸಾಮ್ರಾಜ್ಯಕ್ಕಿಂತ ಕಾಣಿಸದ ಆಧ್ಯಾತ್ಮಿಕ ಸಾಮ್ರಾಜ್ಯ ಬಹಳ ಶಕ್ತಿವಂತವಾದುದು, ದೊಡ್ಡದು. ಆದ್ದರಿಂದ ಆಧ್ಯಾತ್ಮಿಕ ಸಾಮ್ರಾಜ್ಯಕ್ಕೆ ಅಧಿಪತಿಯಾದ ಗುರುವೆ ನಿಜವಾದ ಚಕ್ರವರ್ತಿ ಎಂದು ಆ ದಿನಗಳಲ್ಲಿ ಎಲ್ಲರೂ ಭಾವಿಸುತ್ತಿದ್ದರು. ಕಾಣಿಸದ ಸಾಮ್ರಾಜ್ಯಕ್ಕೆ ರಾರಾಜು ಆದವನು, ಕಾಣಿಸುವ ಸಾಮ್ರಾಜ್ಯಕ್ಕೆ ರಾರಾಜನ್ನು ನಿಯಮಿಸುತ್ತಾನೆಂಬ ಭಾವನೆಯಿಂದ, ಆದಿನ ದೇಶಕ್ಕೆ ಚಕ್ರವರ್ತಿ ಆದವನು ಗುರುವಿನಿಂದ ಕಿರೀಟವನ್ನು ಧರಿಸಿಕೊಳ್ಳುತ್ತಿದ್ದನು. ಚಕ್ರವರ್ತಿ ಧರಿಸುವ ಕಿರೀಟವನ್ನು ತಯಾರು ಮಾಡಿ, ಮೊದಲು ಗುರುವನ್ನು ಪೂಜಿಸಿ ಆ ಕಿರೀಟವನ್ನು ಗುರುವಿಗೆ ಧರಿಸುತ್ತಿದ್ದರು. ಹಾಗೆ ಒಂದುಬಾರಿ ಗುರುವು ಧರಿಸಿದ ಚಕ್ರವಿರುವ ಕಿರೀಟವನ್ನು ನಂತರ ಪಟ್ಟಾಭಿಷೇಕ ಮುಹೂರ್ತದಲ್ಲಿ ಚಕ್ರವರ್ತಿಗೆ ಗುರುವು ತನ್ನ ಕೈಗಳ ಮೂಲಕ ಇಟ್ಟು ಆಶೀರ್ವದಿಸುತ್ತಾನೆ. ಆಗಿನಿಂದ ಆತನು ಚಕ್ರವರ್ತಿಯಾಗಿ ಚಲಾವಣೆ ಆಗುತ್ತಾನೆ.

ವಾಸ್ತವವಾಗಿ ಗುರು ಗುರುತಿಸಲ್ಪಡದವನು. ಆದ್ದರಿಂದ ಈತನೆ ಗುರುವು ಎಂದು ಯಾರೂ ಹೇಳುವುದಕ್ಕೆ ಸಾಧ್ಯವಿಲ್ಲ. ವಾಸ್ತವವಾಗಿ ಗುರುವನ್ನು ಗುರುತಿಸಲಾರದ ಸ್ಥಿತಿಯಲ್ಲಿರುವ ಮನುಷ್ಯರು ಸಂಪ್ರದಾಯಕ್ಕೋಸ್ಕರ ಆಧ್ಯಾತ್ಮಿಕತಜ್ಞನಾದ ವ್ಯಕ್ತಿಯನ್ನು ಗುರುವಾಗಿ ಆಯ್ಕೆ ಮಾಡಿಕೊಳ್ಳುವುದು ನಡೆಯುತ್ತಿದೆ. ಕಾಣಿಸುವವನು ಗುರು ಅಲ್ಲದಿದ್ದರೂ, ಸಂಪ್ರದಾಯಕ್ಕೋಸ್ಕರ ಹಾಗೆ ದೈವಜ್ಞಾನವನ್ನು ಚೆನ್ನಾಗಿ ತಿಳಿದ ವ್ಯಕ್ತಿಯನ್ನು, ದೈವಶಕ್ತಿ ಇರುವ ವ್ಯಕ್ತಿಯನ್ನು ಗುರುವಾಗಿ ಆಯ್ಕೆ ಮಾಡಿಕೊಳ್ಳುವುದು ನಡೆಯುತ್ತಿದೆ. ಹಾಗೆ ಒಬ್ಬ ಗುರುವನ್ನು ಗುರುತಿಸಿಟ್ಟುಕೊಂಡ ನಂತರ ಆತನು ಹೇಳಿರುವುದೇನಾದರೂ ಚಕ್ರವರ್ತಿ ಸಹಿತ ಕೇಳಬೇಕಾಗಿದ್ದೇ, ಆಚರಿಸಬೇಕಾದ್ದೇ. ಆದ್ದರಿಂದ ಗುರುವಿನ ಮಾತು ಕಾಣಿಸುವ ಚಕ್ರವರ್ತಿಗಿಂತ ದೊಡ್ಡದೆಂದು, ಆತನ ಮಾತೆ ಶಾಸನವೆಂದು ಹೇಳಬಹುದು. ಗುರು ಎಂದರೆ ಎಷ್ಟೋ ಭಕ್ತಿ, ಭಯ ಎರಡೂ ಆದಿನ ಎಲ್ಲರಿಗೂ ಇರುತ್ತಿದ್ದವು. ಆ ಕಾಲದಲ್ಲಿ ಗುರುಗಳು ಹೇಳಿದ ಆಧ್ಯಾತ್ಮಿಕವನ್ನು ಅನುಸರಿಸಿ, ಗುರುಗಳ ಮಾತನ್ನು ಅನುಸರಿಸುವ ಚಕ್ರವರ್ತಿಗಳು ಪಾಲನೆ ಸಾಗಿಸುತ್ತಿದ್ದರು. ಪ್ರತಿ ಸಾಮ್ರಾಜ್ಯದಲ್ಲಿಯೂ, ಪ್ರತಿ ಚಕ್ರವರ್ತಿ ಹತ್ತಿರ ಒಬ್ಬ ಗುರು ಇರುತ್ತಿದ್ದನು. ಆಗಿನಕಾಲದಲ್ಲಿ ಗುರುವಿಲ್ಲದ ಚಕ್ರವರ್ತಿಯಾಗಲಿ, ಗುರುವಿಲ್ಲದ ಸಾಮ್ರಾಜ್ಯವಾಗಲಿ ಇರುತ್ತಿರಲಿಲ್ಲ. ದ್ವಾಪರಯುಗದವರೆಗು ಹಾಗೆಯೇ ನಡೆದ ಸಂಪ್ರದಾಯ ಕಲಿಯುಗ ಪ್ರಾರಂಭದಲ್ಲಿಯೇ ಕ್ರಮೇಣ ಬದಲಾವಣೆ ಹೊಂದುತ್ತಾ ಬಂದು, ಇಂದೂ ಸಮಾಜ ಇಂದೂಮತವಾಗಿ ಬದಲಾಗಿ, ಕೊನೆಗೆ ಇಂದೂಮತ ಹಿಂದೂಮತವೆಂಬ ಹೆಸರಿನಿಂದ ಚಲಾವಣೆ ಆಗುತ್ತಿದೆ. ಹೆಸರುಗಳು ಬದಲಾವಣೆಹೊಂದಿದಂತೆ ಸಂಪ್ರದಾಯಗಳಲ್ಲಿಯೂ, ಕ್ರಮಶಿಕ್ಷಣದಲ್ಲಿಯೂ ಪೂರ್ತಿ ಬದಲಾವಣೆ ಬಂದಿದೆ. ಈ ದಿನ ಪೂರ್ತಿ ಕ್ರಮಶಿಕ್ಷಣಾರಾಹಿತ್ಯವಾಗಿ ಹಿಂದೂಮತ ನಿಂತುಹೋಗಿದೆ.

ಯಾವಾಗಾದರೆ ಮತದಲ್ಲಿ ಕ್ರಮಶಿಕ್ಷಣ ಇಲ್ಲದಂತೆ ಹೋಗಿದೆಯೋ ಆಗಲೇ ಸಂಪ್ರದಾಯ ಇಲ್ಲದಹಾಗೆ ಹೋಗಿದೆ. ಸಂಪ್ರದಾಯವಾಗಲಿ,

ಕ್ರಮಶಿಕ್ಷಣವಾಗಲಿ ಇಲ್ಲದ ಹಿಂದೂಮತದಲ್ಲಿ ಯಾರು ಗುರುವೋ, ಯಾರು ಬೋಧಕನೋ ತಿಳಿಯದಹಾಗೆ ಹೋಗಿದೆ. ಅಂತಹ ಸ್ಥಿತಿಯಲ್ಲಿ ಯಾರಷ್ಟಕ್ಕವರು ನಾವು ಜ್ಞಾನಿಗಳು, ಯಾರಷ್ಟಕ್ಕವರು ನಾವು ಗುರುಗಳು ಎಂದು ಅಂದುಕೊಳ್ಳುವುದು ನಡೆಯುತ್ತಿದೆ. ಗುರುವೊಂದರ ಕ್ರಮ ತಪ್ಪಿಹೋದ ಈಗಿನ ಹಿಂದೂ ಮತದಲ್ಲಿ ಒಂದುಕಡೆ ಅಗ್ರಕುಲದವರಾದ ಬ್ರಾಹ್ಮಣರು ನಾವು ಗುರುಗಳು, ನಾವು ಹೇಳಿದಂತೆ ಉಳಿದವರು ಕೇಳಬೇಕಾಗಿದ್ದೇ ಎಂದು ಹೇಳುತ್ತಿದ್ದಾರೆ. ಮತ್ತೊಂದುಕಡೆ ಸ್ವಲ್ಪಮಟ್ಟಿನ ಜ್ಞಾನ ತಿಳಿದಷ್ಟುಮಾತ್ರಕ್ಕೆ ಕೆಲವರು ಬೋಧಕರಾಗಿರುತ್ತಾ ನಾವು ಸರ್ವವು ತಿಳಿದವರು, ನಾವೇ ಗುರುಗಳು ಎಲ್ಲರೂ ನಮ್ಮ ಮಾತು ಕೇಳಬೇಕಾಗಿದ್ದೇ, ನಮ್ಮನ್ನು ಪೂಜಿಸಬೇಕಾಗಿದ್ದೇ ಎನ್ನುತ್ತಿದ್ದಾರೆ. ಸ್ವಲ್ಪ ಜ್ಞಾನ ತಿಳಿದವನು ಸಹ ತನಗೆ ತಿಳಿದ ಜ್ಞಾನವೆಷ್ಟು, ತಾನು ತಿಳಿದುಕೊಳ್ಳಬೇಕಾದ ಜ್ಞಾನವೆಷ್ಟುಯೆಂದು ಆಲೋಚಿಸದೆ, ತನ್ನನ್ನು ತಾನು ಗುರುವಾಗಿ ಊಹಿಸಿಕೊಳ್ಳುತ್ತಿದ್ದಾನೆ. ಇವರೆಲ್ಲಾ ಹೀಗಿರುವಾಗ! ಈದಿನ ಹಿಂದೂ ಮತರಕ್ಷಣೆ ಎಂಬ ಹೆಸರಿನಿಂದ ತಯಾರಾದ ಸಂಘದಲ್ಲಿನವರು ಸಹ, ತಾವೇ ನಿಜವಾಗಲು ಮತವನ್ನು ರಕ್ಷಿಸುವವರೆಂದು, ತಮ್ಮಿಂದಲೇ ಮತವು ನಿಂತಿದೆಯೆಂದು ಅಂದುಕೊಳ್ಳುತ್ತಿದ್ದಾರೆ. ಸ್ವಲ್ಪ ಜ್ಞಾನ ತಿಳಿದ ಅಗ್ರಕುಲದವರೂ, ಆಧ್ಯಾತ್ಮಿಕ ಬೋಧಕರೂ ನಾವು ಗುರುಗಳೆಂದು ಹೇಳಿಕೊಂಡರೂ ದೊಡ್ಡ ಆಶ್ಚರ್ಯವೇನು ಆಗುವುದಿಲ್ಲವಾಗಲಿ, ಸ್ವಲ್ಪವೂ ಜ್ಞಾನ ತಿಳಿಯದವರೂ, ಭಗವದ್ಗೀತೆಯನ್ನು ಓದದವರೂ, ಕೊನೆಗೆ ತಮ್ಮ ಮತಗ್ರಂಥ ಇಂತಹದೆಂದು ಸಹ ತಿಳಿಯದವರು, ತಾವು ಹಿಂದೂಧರ್ಮ ರಕ್ಷಕರೆಂದು ಕೊಳ್ಳುವವರು ತಮ್ಮನ್ನು ತಾವು ಜ್ಞಾನಿಗಳಾಗಿ, ಗುರುಗಳಾಗಿ ಲೆಕ್ಕಿಸಿಕೊಳ್ಳುವುದು ನೋಡಿದರೆ ಬಹಳ ಆಶ್ಚರ್ಯವೆನಿಸುತ್ತದೆ.

ಈದಿನ ಕ್ರಮಶಿಕ್ಷಣ ಇಲ್ಲದ ಹಿಂದೂಮತದಲ್ಲಿ ನಿಜವಾಗಿ ದೇವರೇ ಬಂದು ಗುರುವಾಗಿ ಉದ್ಭವಿಸಿದರೂ, ಆತನನ್ನು ಅವಮಾನಮಾಡಿ ನೀನು ಗುರುವಲ್ಲ ನಾವೇ ಗುರುಗಳು ಎನ್ನುವವರು ಇದ್ದಾರೆ. ಅಷ್ಟೇ ಅಲ್ಲದೆ ಮತರಕ್ಷಕರು ಸಹ ನಾವು ಹೇಳಿದಹಾಗೆ, ನಮ್ಮ ಮತಕ್ಕೆ ಅನುಕೂಲವಾಗಿ ಜ್ಞಾನ ಹೇಳಬೇಕಾಗಲಿ,

ನಿನ್ನ ಇಷ್ಟಬಂದಂತೆ ಹೇಳುವ ಹಾಗಿಲ್ಲ ಎಂದು ನಿಜಗುರುವಿಗೂ ಸಹ ಆಜ್ಞೆಗಳು ವಿಧಿಸಿ, ನಾವು ಹೇಳಿದಂತೇ ನೀನು ಹೇಳಬೇಕು ಎನ್ನುವ ಹಿಂದೂಧರ್ಮರಕ್ಷಕರು ಇದ್ದಾರೆ ಈ ದಿನ ಹಿಂದೂ ಧರ್ಮಗಳೆಂದರೆ ಏನೋ ತಿಳಿಯದವರು, ಹಿಂದೂಧರ್ಮ ರಕ್ಷಕರೆಂದು ಹೇಳಿಕೊಳ್ಳುತ್ತಿದ್ದಾರೆ. ಭಗವದ್ಗೀತೆಯನ್ನು ಓದದವರು, ಮತರಕ್ಷಕರೆಂದು ಹೇಳಿಕೊಳ್ಳುತ್ತಿದ್ದಾರೆ. ಹಿಂದೂಮತದಲ್ಲಿನ ಕನಿಷ್ಟ ಒಂದು ಧರ್ಮವನ್ನು ಸಹ ತಿಳಿಯದವರು, ಹಿಂದೂತ್ವ ರಚನೆ ಬಗ್ಗೆ ಮಾತನಾಡುತ್ತಿದ್ದಾರೆ. ಮುಸ್ಲಿಮ್‌ರು ತಮ್ಮ ಮತವಲ್ಲದವರನ್ನು ಜೇಹಾದ್ ಹೆಸರಿನಿಂದ ಪೀಡಿಸುತ್ತಿರುವಾಗ, ಹಿಂದೂಗಳು ತಮ್ಮ ಮತಯಾವುದೊ, ಪರಮತ ಯಾವುದೊ ಗುರುತಿಸಲಾರದ ಸ್ಥಿತಿಯಲ್ಲಿದ್ದು, ತಮ್ಮ ಮತದವರನ್ನು ತಾವೇ ಹಿಂಸಿಸಿಕೊಳ್ಳುತ್ತಿದ್ದಾರೆ. ಹಿಂದೂಗಳಲ್ಲಿ ಸ್ವಲ್ಪವೂ ಜ್ಞಾನವಿಲ್ಲದಿರುವುದರಿಂದ ಅಜ್ಞಾನ ಕುರುಡುತನದಿಂದ, ತನ್ನ ಮತವನ್ನು ಪರ ಮತವಾಗಿ ತಿಳಿದು ಒಂದೇ ಮತದವರಾದ ಹಿಂದೂಗಳು ಹಿಂದೂ ಗಳೊಂದಿಗೇ ಹೊಡೆದಾಡುಕೊಳ್ಳುತ್ತಿದ್ದಾರೆ. ಮುಸ್ಲಿಮ್ ಮತದಲ್ಲಿ ಜೇಹಾದ್ ಎನ್ನುವ ಹೆಸರಿನಿಂದ ಸ್ವಮತ ರಕ್ಷಣೆಗೋಸ್ಕರ, ಇತರ ಮತಸ್ಥರನ್ನು ಹಿಂಸಿಸುವುದು ಇಲ್ಲವೆ ಸಾಯಿಸುವುದು ನಡೆಯುತ್ತಿದೆ. ಹಾಗೆ ಮಾಡುವುದೇ ಅವರಲ್ಲಿ ಕೆಲವರ ಮುಖ್ಯ ಕಾರ್ಯವಾಗಿರುವಾಗ, ಅದನ್ನೇ ಅವರು ದೇವರಿಗೋಸ್ಕರ ಮಾಡುವ ಪವಿತ್ರಯುದ್ಧ ಎನ್ನುತ್ತಿದ್ದಾರೆ. ಆದರೆ ಇಲ್ಲಿ ಹಿಂದೂಗಳಲ್ಲಿ ಪವಿತ್ರಯುದ್ಧ ಎನ್ನುವ ಹೆಸರು ಇಲ್ಲದಿದ್ದರೂ, ಮುಸ್ಲಿಮ್‌ರು ತಮ್ಮ ಮತ ರಕ್ಷಣೆಗೆ ಹೇಗೆ ಉಳಿದ ಮತಸ್ಥರನ್ನು ಸಾಯಿಸುತ್ತಿದ್ದಾರೊ, ಹಾಗೆಯೇ ತಮ್ಮ ಮತರಕ್ಷಣೆಗೋಸ್ಕರ ತಾವು ಸಹ ಇತರ ಮತದವರನ್ನು ಹಿಂಸಿಸಬೇಕೆಂದುಕೊಂಡಿದ್ದಾರೆ. ಮತಪ್ರಚಾರವೇ ತಮ್ಮ ಧ್ಯೇಯವಾಗಿ ಇಟ್ಟುಕೊಂಡ ಕ್ರೈಸ್ತರ ಮೇಲೆ ಮತ್ತು ಮುಸ್ಲಿಮ್‌ರ ಮೇಲೆ ತಮ್ಮ ದಾಳಿಗಳಿರಬೇಕೆಂದುಕೊಂಡಿದ್ದಾರೆ. ಆದರೆ ಮುಸ್ಲಿಮ್‌ರಂತೆ ಹಿಂದೂಗಳು ಪ್ರತ್ಯೇಕವಾದ ದಾಳಿಗಳು ಎಲ್ಲಿಯೂ ಮಾಡದಿದ್ದರೂ ಕೈಲಾದಷ್ಟು ಮಟ್ಟಿಗೆ ಮಾಡಬೇಕೆಂದಿದ್ದಾರೆ.

ಉಳಿದ ಎರಡು ಮತಗಳು ಕ್ರಮಶಿಕ್ಷಣ ಇರುವ ಮತಗಳಾಗಿರುವುದರಿಂದ ಆ ಮತಸ್ಥರು ಅವರ ಗುರುಗಳ ಸೂಚನೆಯನ್ನು ಅನುಸರಿಸಿ ದಾಳಿಗಳು ಯಾರಮೇಲೆ ಮಾಡಬೇಕೋ ಮೊದಲೆ ನಿರ್ಣಯಿಸಿ ಮಾಡುತ್ತಿರುತ್ತಾರೆ. ಆದರೆ ಹಿಂದೂಮತದಲ್ಲಿ ಕ್ರಮಶಿಕ್ಷಣಾರಾಹಿತ್ಯದಿಂದ ಅವರಿಗೆ ಒಬ್ಬ ಯಾಜಮಾನನಾಗಲಿ, ಗುರುವಾಗಲಿ ಇಲ್ಲದಿರುವುದರಿಂದ, ಯಾರಮೇಲೆ ದಾಳಿಮಾಡಬೇಕೋ ಸೂಚನೆಕೊಡುವವರು ಇಲ್ಲದಿರುವುದರಿಂದ, ಅವರ ದಾಳಿಗಳು ದಾರಿತಪ್ಪಿ ತಮ್ಮ ಮತ ನಾಶಕ್ಕೆ ಉಪಯೋಗಪಡುತ್ತಿವೆ. ಇಲ್ಲಿ ಚಿಕ್ಕ ಉದಾಹರಣೆ ಹೇಳುತ್ತೇನೆ ನೋಡಿರಿ. ಈ ಉದಾಹರಣೆ ಪ್ರತ್ಯಕ್ಷವಾಗಿ ನಡೆದಿದೆ, ನಾನು ಸ್ವತಃ ನೋಡಿರುವುದು. ಕರ್ನಾಟಕ ರಾಷ್ಟ್ರದಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಒಂದು ಹಳ್ಳಿಯಲ್ಲಿ ಒಂದು ಮರಿಕೋಳಿಯನ್ನು ನೋಡುತ್ತಾ ಒಂದುಕಡೆ ಕುಳಿತುಕೊಂಡಿದ್ದೇನೆ. ಕೋಳಿ ಹತ್ತಿರವಿರುವ ಅದರ ಮರಿಗಳು ಸುಮಾರು ಹತ್ತು ದಿನಗಳ ವಯಸ್ಸಿನವೆಂದು ಕೊಳ್ಳುತ್ತೇನೆ. ತಾಯಿಕೋಳಿ ಮುಂದೆಹೋಗುತ್ತಿರುವಾಗ ಕೋಳಿಮರಿಗಳು ಅದರಹಿಂದೆ ಹೋಗುತ್ತಿವೆ. ಸುಮಾರು ಹತ್ತುನಿಮಿಷಗಳು ಒಂದು ಕಣದಲ್ಲಿ ಭೂಮಿಯನ್ನು ಕೆದರಿ (ಕಾಲುಗಳಿಂದ ಕೆದರಿ) ಹೊರಬಿದ್ದ ಕಾಳುಗಳನ್ನು ಎಷ್ಟೋ ಪ್ರೇಮದಿಂದ ಮರಿಗಳಿಗೆ ಕೋಳಿ ತಿನಿಸುವುದನ್ನು ನೋಡಿ ತಾಯಿ ಪ್ರೀತಿ ಪಕ್ಷಿಗಳಲ್ಲಿ ಸಹ ಆ ರೀತಿಯಾಗಿ ಇದೆಯೆಂದು ಅಂದುಕೊಂಡೆನು. ತಾಯಿಕೋಳಿ ಸುತ್ತಾ ಹನ್ನೆರಡು ಮರಿಗಳಿವೆ. ನಂತರ ತಾಯಿಕೋಳಿ ಮುಂದಕ್ಕೆ ಬಂದರೆ, ತಾಯಿ ಹಿಂದೆಯೇ ಮರಿಗಳು ಸಹ ಬರುವುದು ನಡೆದಿದೆ. ಆದರೆ ಅಲ್ಲಿ ಒಂದು ಚಿಕ್ಕ ಕೊಳಚೆ ಕಾಲುವೆ ಇರುವಾಗ, ಆ ಕಾಲುವೆಯನ್ನು ತಾಯಿಕೋಳಿ ಸುಲಭವಾಗಿ ದಾಟಿಬಂದಿದೆ. ಆದರೆ ಮರಿಗಳು ಮಾತ್ರ ಕಾಲುವೆಯನ್ನು ದಾಟಿಲಾರದೆ ಹೋಗಿವೆ. ಮರಿಗಳೆಲ್ಲ ಕಾಲುವೆಯನ್ನು ದಾಟಿ ಬರಬೇಕೆಂದು ಪ್ರಯತ್ನ ಮಾಡುತ್ತಿವೆ. ಅಲ್ಲಿರುವುದು ಚಿಕ್ಕ ಕೊಳಚೆ ನೀರಿನಕಾಲುವೆ ಆದರೂ, ಆ ಕಾಲುವೆಯಲ್ಲಿ ಅಲ್ಲಿಯೇ ಇರುವ ಮೆಕಾನಿಕ್‌ಷೆಡ್‌ನವನು ಇಂಜನ್‌ನಿಂದ ತೆಗೆದುಹಾಕಿದ ವ್ಯರ್ಥವಾಗಿರುವ ಕಪ್ಪನೆಯ ಆಯಿಲ್‌ನ್ನು ಕಾಲುವೆಯಲ್ಲಿ ಹಾಕಿರುವುದರಿಂದ, ಕಾಲುವೆ ಊದಕ್ಕು ಕಪ್ಪಗೆ ಇಂಜನ್‌ಆಯಿಲ್ ಇದೆ.

ಕಾಲುವೆ ದಾಟಬೇಕೆಂದು ಪ್ರಯತ್ನ ಮಾಡುವ ಕೋಳಿಮರಿಗಳಲ್ಲಿ ಒಂದು ಮರಿ ಕಾಲುವೆಯನ್ನು ಎಗರಿ ಈಚೆದಡಕ್ಕೆ ಬಂದಿದೆ. ಅದರಹಿಂದೆಯೇ ಎಗರಬೇಕೆಂದು ನೋಡಿದ ಮತ್ತೊಂದುಮರಿ ಕಾಲುವೆಯಲ್ಲಿ ಬಿದ್ದುಹೋಗಿದೆ. ಕಾಲುವೆಯಲ್ಲಿ ಬಿದ್ದಾಗ ಕಪ್ಪು ಆಯಿಲ್ ಅದಕ್ಕೆ ತಗುಲಿಕೊಳ್ಳುವುದರಿಂದ, ಬಿಳಿಯಕೋಳಿಮರಿ ಕಪ್ಪು ಬಣ್ಣದಲ್ಲಿ ಕಾಣಿಸುತ್ತಿದೆ. ಹಾಗೆ ಕಾಲುವೆಯಲ್ಲಿ ಬಿದ್ದ ಮರಿ ಹೊರಗೆ ಹತ್ತಿಬಂದು ತಾಯಿಹತ್ತಿರಕ್ಕೆ ಹೋಗಿದೆ. ಆದರೆ ತಾಯಿಕೋಳಿ ತನ್ನ ಮರಿಯನ್ನು ತಾನು ಗುರುತಿಸಲಾರದೆ, ನೆನೆದ ಶರೀರದಿಂದ ಕಪ್ಪು ಬಣ್ಣದಲ್ಲಿರುವ ಮರಿ ತನ್ನದು ಅಲ್ಲವೆಂದುಕೊಂಡಿದೆ. ತಕ್ಷಣ ತಾಯಿಕೋಳಿ ತನ್ನ ಮೂಗಿನಿಂದ ಕೋಳಿಮರಿಮೇಲೆ ದಾಳಿಮಾಡುವುದರಿಂದ ಕೋಳಿಮರಿ ಮರಣಿಸಿದೆ. ಇದೆಲ್ಲವೂ ನಮ್ಮ ಕಣ್ಣೆದುರೆ ನಡೆದರೂ, ತಾಯಿಕೋಳಿಗೆ ಕಪ್ಪಗೆ ಕಾಣಿಸುವ ಮರಿ ತನ್ನದೆ ಎಂದು ಹೇಳಲಾರೆವು. ಹತ್ತಿರಕ್ಕೆ ಬಂದಿರುವ ಮರಿಯನ್ನು ಶತ್ರುವನ್ನು ನೋಡಿದಂತೆ ನೋಡಿ ಅದರಮೇಲೆ ದಾಳಿಮಾಡಿದೆ. ಕೋಳಿಮರಿಗೆ ಕಪ್ಪುಬಣ್ಣ ತಗಲಿಕೊಂಡಮಾತ್ರಕ್ಕೆ ತನ್ನ ಮರಿಯನ್ನು ತಾನೇ ಕೋಳಿ ಗುರುತಿಸಲಾರದೆಹೋಗಿದೆ. ಅಲ್ಲಿ ನಡೆದ ಸಂಘಟನೆಯಲ್ಲಿ ಮರಿಕೋಳಿಯ ತಪ್ಪು ಏನೂ ಇಲ್ಲ ಆದರೆ, ಪೂರ್ತಿ ತಾಯಿಕೋಳಿಯ ತಪ್ಪೆ ಕಾಣಿಸುತ್ತಿದೆ. ಕಾಲುವೆಯಲ್ಲಿ ಇಳಿದುಬಂದಮಾತ್ರಕ್ಕೆ, ತನ್ನ ಮರಿಗೆ ಸ್ವಲ್ಪಮಟ್ಟಿನ ಕಪ್ಪನೆಯ ಆಯಿಲ್ ತಗಲಿಕೊಂಡಮಾತ್ರಕ್ಕೆ ಇದು ತನ್ನ ಮರಿಯಾ! ಅಲ್ಲವಾ! ಎಂಬ ವಿಚಕ್ಷಣೆ ಕೋಳಿಗೆ ಇಲ್ಲದಿರುವುದರಿಂದ ಹಾಗೆ ನಡೆದಿದೆ. ಆಗ ತಾಯಿಕೋಳಿ ಹತ್ತಿರ ಬರಬೇಕೆಂದು ಪ್ರಯತ್ನಿಸಿದವುಗಳಲ್ಲಿ ಐದು ಮರಿಗಳು ಕಾಲುವೆಯನ್ನು ಎಗರಿಬಂದಿವೆ. ಉಳಿದ ಏಳು ಮರಿಗಳು ಕಾಲುವೆಯನ್ನು ಎಗರಲಾರದೆ ಕಾಲುವೆಯಲ್ಲಿ ಇಳಿದುಬಂದಿರುವುದರಿಂದ ತಾಯಿಕೋಳಿ ಎಲ್ಲವನ್ನು ಸಾಯಿಸಿತು. ಉಳಿದ ಐದುಮರಿಗಳಜೊತೆ ಅಲ್ಲಿಂದ ಹೊರಟು ಹೋಯಿತು.

ಅಲ್ಲಿ ನಡೆದ ಸಂಘಟನೆಯಲ್ಲಿ ತಾಯಿಕೋಳಿಗೆ ಬುದ್ಧಿಯಾಗಲಿ, ವಿಚಕ್ಷಣಾ ಜ್ಞಾನವಾಗಲಿ ಇಲ್ಲದಿರುವುದರಿಂದ, ತನ್ನ ಮರಿಗಳನ್ನು ತಾನೆ

ಗುರುತಿಸಲಾರದೆ ಇರುವ ಹನ್ನೆರಡು ಮರಿಗಳಲ್ಲಿ ಏಳು ಮರಿಗಳನ್ನು ತಾನೆ ಸಾಯಿಸಿದೆ. ಅದಕ್ಕೂ ಮೊದಲು ಹತ್ತು ನಿಮಿಷಗಳ ಕೆಳಗೆ ಭೂಮಿಯನ್ನು ಕಾಲುಗಳಿಂದ ಕೆದರಿ, ಮಣ್ಣಿನಲ್ಲಿನ ಕಾಳನ್ನು ಹೊರಗೆ ತೆಗೆದು, ತನ್ನ ಮರಿಗಳಿಗೆ ಪ್ರೇಮದಿಂದ ತಿನ್ನಿಸಿದ ತಾಯಿಕೋಳಿ, ಬಣ್ಣಬಳಿದುಕೊಂಡ ಮರಿಗಳು ತನ್ನವು ಅಲ್ಲವೆಂದು ಅಸೂಯೆಯಿಂದ ಸಾಯಿಸಿಹಾಕುವುದು ನಡೆದಿದೆ. ಇಂತಹದರೊಂದಿಗೆ ಸಮಾನವಾದ ಸಂಘಟನೆ ಮನುಷ್ಯರಲ್ಲಿ ನಡೆದರೆ, ತನ್ನವರನ್ನು ತಾನೇ ಗುರುತಿಸಲಾರದೆ ಸಾಯಿಸಿಕೊಂಡರೆ, ಅಂತಹವರನ್ನು ಮನುಷ್ಯರೆನ್ನುವುದಕ್ಕೆ ಸಹ ಮನಸ್ಸು ಒಪ್ಪಿಕೊಳ್ಳುವುದಿಲ್ಲ. ಆದರೆ ಹಿಂದೂಮತದಲ್ಲಿ ನಾವು ಹಿಂದೂರಕ್ಷಕರೆಂಬುವವರು ತಮ್ಮ ಹಿಂದೂಗಳನ್ನೇ ಪರರಂತೆ ಭಾವಿಸಿ, ಹಿಂಸಿಸಿದ ಸಂಘಟನೆಗಳನ್ನು ಸ್ವತಃವಾಗಿ ನಾನು ನೋಡಿದ್ದೇನೆ. ಈ ದಿನ ಸ್ವಲ್ಪವೂ ಜ್ಞಾನವಿಲ್ಲದ ಹಿಂದೂಗಳು ಕೆಲವರು ಮತರಕ್ಷಣೆ ಸಂಘದಲ್ಲಿರುವುದರಿಂದ, ಅವರು ಅವರ ಮತವನ್ನು ರಕ್ಷಿಸಿಕೊಳ್ಳುವುದಕ್ಕೆ ಇತರ ಮತಗಳನ್ನು ಹಿಂಸಿಸಿದರೂ ಅದು ಅವರ ಕೆಲಸ! ಎಂದು ಅಂದುಕೊಳ್ಳುತ್ತೇವೆ. ಹಾಗಲ್ಲದೆ ಇತರ ಮತದವರನ್ನು ಅಲ್ಲದೆ ತಮ್ಮ ಮತದವರನ್ನೆ ಇತರ ಮತದವರಾಗಿ ಲೆಕ್ಕಿಸಿ ಭಾಧಿಸಿದಾಗ ಅವರನ್ನು ಏನನ್ನಬೇಕೊ ನೀವೇ ಹೇಳಿರಿ! ಕಪ್ಪುಬಣ್ಣವನ್ನು ಬಳಿದುಕೊಂಡು ಮಾರುವೇಷ ಹಾಕಿಕೊಂಡಂತೆ ಕಾಣಿಸಿದ ತನ್ನ ಮರಿಗಳನ್ನು ಕೋಳಿ ಕಂಡುಕೊಳ್ಳಲಿಲ್ಲ, ಅಂದರೆ ಅದಕ್ಕೆ ಸ್ವಲ್ಪ ಕಾರಣ ಇದೆಯೆಂದೇ ಹೇಳಬಹುದು. ಪೂರ್ತಿ ಬಣ್ಣ ಬದಲಾಗಿಹೋಗಿ ಮಾರುವೇಷದಲ್ಲಿರುವ ಮರಿಗಳನ್ನು ತಾಯಿಕೋಳಿಗೆ ಪ್ರೀತಿ ಇದ್ದರೂ, ಅವು ತನ್ನ ಮರಿಗಳಲ್ಲವೆಂದು ನಿರ್ಣಯಕ್ಕೆ ಬಂದಾಗ ಹಾಗೆ ಮಾಡಿದೆ. ಕೋಳಿಗೆ ವೇಷವನ್ನು ಕುರಿತು ಆಲೋಚಿಸುವ ಶಕ್ತಿ ಇಲ್ಲವೆಂದು ಸ್ವಲ್ಪ ಸರಿಮಾಡಿಹೇಳಬಹುದು. ಒಂದುವೇಳೆ ಹಾಗಲ್ಲದಿದ್ದರೂ ಮರಿಗಳ ಬಣ್ಣಬದಲಾಗದಂತೆ ಇದ್ದರೂ, ಕೆಲವು ಮರಿಗಳು ಅದರಹಿಂದೆ ವೇಗವಾಗಿ ನಡೆಯಲಾರದೆ ಆಲಸ್ಯವಾಗಿ ತನ್ನಹತ್ತಿರಕ್ಕೆ ಬಂದರೆ, ಅಷ್ಟುಮಾತ್ರಕ್ಕೆ ಇವು ನನ್ನ ಮರಿಗಳು ಅಲ್ಲವೆಂದುಕೊಂಡು ಕೋಳಿ ತನ್ನ ಮರಿಗಳನ್ನು ಸಾಯಿಸಿದರೆ ಅದಕ್ಕಿಂತ ದುರ್ಮಾರ್ಗ, ಅದಕ್ಕಿಂತ ತಿಳುವಳಿಕೆ ಇಲ್ಲದ ಕೆಲಸ ಮತ್ತೊಂದು ಇರುವುದಿಲ್ಲವೆಂದು

ಹೇಳಬಹುದು. ತಾನು ಓಡಿಹೋದಂತೆ ತನ್ನ ಹಿಂದೆ ಓಡಲಿಲ್ಲವೆಂದೊ, ತಾನು ಅರಚಿದಂತೆ ಮರಿಗಳು ಸಹ ಅರಚಲಿಲ್ಲವೆಂದೊ, ತನ್ನ ಮರಿಗಳನ್ನು ಕೋಳಿ ಸಾಯಿಸಿದರೆ ಅದರ ಹತ್ತಿರ ತನ್ನ ಮರಿಗಳು ಎರಡುಮೂರು ದಿನಗಳಿಗಿಂತ ಹೆಚ್ಚಿನ ಕಾಲ ಇರುವುದಿಲ್ಲವೆಂದು, ಎರಡುಮೂರು ದಿನಗಳಲ್ಲಿ ಎಲ್ಲಾ ಮರಣಿಸುತ್ತವೆಂದು ಹೇಳಬಹುದು. ಹಾಗೆಯೇ ಹಿಂದೂ ಮತಸ್ಥನು ತಾನು ತನ್ನ ಮತವನ್ನು ಪ್ರೀತಿಸುತ್ತಾ, ಇತರ ಮತಗಳನ್ನು ದ್ವೇಷಿಸುತ್ತಾ ಇದ್ದು, ತನ್ನ ಮತ ಅಲ್ಲದವರನ್ನು ಸಾಯಿಸಬೇಕೆಂದುಕೊಂಡಾಗ, ಒಂದುವೇಳೆ ತನ್ನ ಮತದವರು ಕೋಳಿಮರಿಗಳು ಬಣ್ಣ ಬಳಿದುಕೊಂಡಂತೆ ತನ್ನ ಮತದವರು ಮುಸ್ಲಿಮ್ ಮತದವರಂತೆ ಗಡ್ಡ ಧರಿಸಿ, ಲುಂಗಿಧರಿಸಿ ಕಾಣಿಸಿದ್ದರೆ ಅವರ ವೇಷಧಾರಣೆ ನೋಡಿ ತನ್ನವರು ಅಲ್ಲವೆಂದು, ಮುಸ್ಲಿಮರೆಂದು ಅಂದುಕೊಂಡಿದ್ದಾರೆಂದು, ಆದ್ದರಿಂದ ಅವರ ವೇಷವನ್ನನುಸರಿಸಿ ಮುಸ್ಲಿಮ್‌ರಾಗಿ ನಿರ್ಣಯಿಸಿಕೊಂಡು ಅವರಮೇಲೆ ಹಿಂದೂವಾಗಿರುವವನು ದಾಳಿ ಮಾಡಿದ್ದಾನೆಂದರೆ, ಕೋಳಿ ತನ್ನ ಮರಿಗಳನ್ನು ಕಂಡುಕೊಳ್ಳದೆ ಇರಿದು ಸಾಯಿಸಿದಂತೆ, ಇಲ್ಲಿ ನಡೆದಿ ಎಂದು ಅಂದುಕೊಳ್ಳಬಹುದು.

ಹಾಗಲ್ಲದೆ ತಾಯಿಕೋಳಿ ತನ್ನ ಮರಿಗಳು ತನ್ನಹಿಂದೆ ತಾನು ಹೋದಷ್ಟು ವೇಗವಾಗಿ ಬರಲಿಲ್ಲವೆಂದೋ, ಇಲ್ಲವೆ ತನ್ನಂತೆ ಅರಚಲಿಲ್ಲವೆಂದೊ ತನ್ನ ಮರಿಗಳನ್ನು ಸಾಯಿಸಿದರೆ, ಅದಕ್ಕಿಂತ ದುಮಾರ್ಗವಿಲ್ಲವೆಂದು, ಆ ಸಂಘಟನೆ ಕೋಳಿ ಜಾತಿಗೆ ಕಳಂಕವೆಂದು ಹೇಳಬಹುದು. ಹಾಗೆಯೇ ಒಬ್ಬ ಹಿಂದೂ ಮತರಕ್ಷಕ ಸಂಘದವರು ತಾವು ಆರಾಧಿಸುವ ದೇವರನ್ನು ಆರಾಧಿಸಲಿಲ್ಲವೆಂದೊ, ತಾವು ಜಪಿಸುವ ಮಂತ್ರವನ್ನು ಜಪಿಸಲಿಲ್ಲವೆಂದೊ ನೆಪತೋರಿಸಿ, ಅಷ್ಟುಮಾತ್ರಕ್ಕೆ ಅವರನ್ನು ತಮ್ಮ ಹಿಂದೂಗಳಾಗಿ ಲೆಕ್ಕಿಸದಂತೆ, ಅವರನ್ನು ಪರ ಮತದವರೆಂದು ಲೆಕ್ಕಿಸಿ ಅವರಮೇಲೆ ದಾಳಿಮಾಡಿದರೆ, ತನ್ನಂತೆ ನಡೆಯಲಿಲ್ಲವೆಂದು, ತನ್ನಂತೆ ಅರಚಲಿಲ್ಲವೆಂದು ತನ್ನ ಮರಿಗಳ ಮೇಲೆ ಅನುಮಾನ ಬೆಳೆಸಿಕೊಂಡು, ಅವು ತನ್ನ ಮರಿಗಳು ಅಲ್ಲವೇನೊಯೆಂದು ತಾಯಿಕೋಳಿ ತನ್ನ ಮರಿಗಳನ್ನು

ಸಾಯಿಸಿಕೊಂಡಂತೆ, ನನ್ನ ಬೊಟ್ಟು ಇಡದವನು, ನನ್ನ ಮಂತ್ರವನ್ನು ಜಪಮಾಡದವನು, ನನ್ನಂತೆ ಜುಟ್ಟು ಬಾಚದವನು ತನ್ನವನು ಅಲ್ಲವೇನೊ! ಎನ್ನುವ ಅನುಮಾನದಿಂದ ತನ್ನ ಹಿಂದೂಗಳ ಮೇಲೆ ದಾಳಿಮಾಡುವ ಹಿಂದೂಗಳನ್ನು ಏನನ್ನಬೇಕೊ ನೀವೆ ಯೋಚಿಸಿರಿ. ತನ್ನ ಮರಿಗಳನ್ನು ಸಾಯಿಸಿಕೊಂಡ ಕೋಳಿಯನ್ನು ನೋಡಿ ಇದು ಕೋಳಿಜಾತಿ ಅಲ್ಲವೆನ್ನುವಂತೆ, ಅಂತಹವರನ್ನು ಮನುಷ್ಯರೆ ಅಲ್ಲವೆನ್ನಬೇಕು. ಇನ್ನೊಂದು ಲೆಕ್ಕದ ಪ್ರಕಾರ ಅವನು ಹಿಂದೂರಕ್ಷಣಾ ಸಂಘದಲ್ಲಿದ್ದರು, ಅವನು ಹಿಂದೂ ರಕ್ಷಣೆ ಮಾಡಲಿಲ್ಲ ಆದರೆ, ಅನುವಮಾನದಿಂದಲೋ ಇಲ್ಲವೆ ಗುರುತು ಬರಬೇಕೆಂಬ ಉದ್ದೇಶದಿಂದಲೊ, ಅವನು ಹಿಂದೂ ಭಕ್ಷಣೆ ಮಾಡುತ್ತಿದ್ದಾನೆಂದು ಹೇಳಬಹುದು. ತನ್ನವರನ್ನು ತಾನೇ ಸಾಯಿಸಿಕೊಳ್ಳುವ ಹಿಂದೂಗಳಿಗಿಂತ ಜೀಹಾದ್ ಎಂದೊ, ಪವಿತ್ರ ಯುದ್ಧವೆಂದೊ, ಇತರ ಮತಸ್ಥರನ್ನು ಸಾಯಿಸುವ ಮುಸ್ಲಿಮ್‌ರು ಮೇಲಲ್ಲವೆ! ಎಂದು ನಾನು ಅನ್ನುತ್ತಿದ್ದೇನೆ. ಏಕೆಂದರೆ ಅವನ ನಿಯಮದ ಪ್ರಕಾರ ಅವನು ತನ್ನ ಮತ ಅಲ್ಲದಿರುವವರನ್ನು ಸಾಯಿಸುತ್ತಿದ್ದಾನೆ. ಹಿಂದೂರಕ್ಷಣ ಸಂಘದಲ್ಲಿ ಸಹ ಇತರ ಮತಸ್ಥರನ್ನು ಪೀಡಿಸಬೇಕೆಂಬ ಉದ್ದೇಶ ಹೊಂದಿದ್ದು, ತಿಳುವಳಿಕೆ ಇಲ್ಲದೆ ತನ್ನವರನ್ನೆ ಸಾಯಿಸುವುದರಿಂದ, ಹಿಂಸಿಸುವುದರಿಂದ, ತನ್ನ ಮತವನ್ನು ತಾನು ನಾಶ ಮಾಡಿಕೊಂಡಂತಾಗುತ್ತಿದೆ ಅಲ್ಲವೆ! ಎಂದು ಕೇಳುತ್ತಿದ್ದೇನೆ. ಮುಸ್ಲಿಮ್‌ರದು ನ್ಯಾಯವೋ! ಅನ್ಯಾಯವೋ! ಅವರು ಅಂದುಕೊಂಡಿದ್ದು ಸಕ್ರಮವಾಗಿ ಮಾಡುತ್ತಿರುವಾಗ ಹಾಗೆಯೇ ಹಿಂದೂಗಳು ಅಂದುಕೊಂಡಿರುವುದು ಸಕ್ರಮವಾಗಿ ಮಾಡದಿರುವಾಗ, ಮತರಕ್ಷಣೆಯಲ್ಲಿ ಹಿಂದೂಗಳಿಗಿಂತ ಮುಸ್ಲಿಮ್‌ರೇ ಮೇಲು ಅಲ್ಲವೆ! ಎಂದು ಹೇಳವುದು ತಪ್ಪುವುದಿಲ್ಲ.

ಹಿಂದೂಮತದಲ್ಲಿ ಪೂರ್ವದಲ್ಲಿ ಮನುಸ್ಯರೆಲ್ಲರಿಗಿಂತ ಗುರುಗಳೇ ದೊಡ್ಡವರೆಂದು, ಅವರನ್ನು ರಾಜರು, ಚಕ್ರವರ್ತಿಗಳು ಸಹಿತವು ಅನುಸರಿಸುತ್ತಿದ್ದರೆಂದು ಹೇಳಿಕೊಂಡಿದ್ದೇವೆ. ಈದಿನ ಹಿಂದೂಗಳಲ್ಲಿ ಅಜ್ಞಾನ ಬೆಳೆದುಹೋಗಿ ಸಾಧಾರಣ ಮನುಷ್ಯ ಸಹಿತ ಗುರುಗಳನ್ನು ನೀನು ಹೀಗೆ

ಇರಬೇಕು, ನಾವು ಹೇಳಿದ ಮಂತ್ರವನ್ನೇ ಹೇಳಬೇಕು, ನಾವು ಇಟ್ಟಿರುವ ನಾಮವನ್ನೇ ಇಡಬೇಕೆಂದು ಹೇಳಿದ್ದಾನೆಂದರೆ, ಹಿಂದೂಮತದಲ್ಲಿ ಕ್ರಮಶಿಕ್ಷಣ ಪೂರ್ತಿ ಇಲ್ಲದಂತೆ ಹೋಗಿದೆಂದು, ಯಾರ ಇಷ್ಟಾರಾಜ್ಯವಾಗಿ ಅವನು ಪ್ರವರ್ತಿಸುತ್ತಿದ್ದಾನೆಂದು, ದೊಡ್ಡವರು ಚಿಕ್ಕವರು ಎಂಬುದಾಗಲಿ, ಗುರುವು, ದೈವವೆಂದಾಗಲಿ ಸ್ವಲ್ಪವೂ ಆಲೋಚಿಸುತ್ತಿಲ್ಲವೆಂದು, ಯಾರಷ್ಟಕ್ಕವರು ತಾವು ತಿಳಿದವರಾಗಿ ಪ್ರವರ್ತಿಸುತ್ತಾ, ಕೊನಗೆ ಗುರುಗಳನ್ನು ಸಹ ಗೌರವಿಸದೆ, ನೀನು ನಾವು ಹೇಳಿದಹಾಗೆ ಕೇಳಬೇಕೆಂದು, ಹಾಗೆ ಕೇಳದೆಹೋದರೆ ನೀನು ಹಿಂದೂವೇ ಅಲ್ಲವೆಂದು ಅನ್ನುತ್ತಿದ್ದಾರೆ. ಹಿಂದೂಮತ ಈ ವಿಧವಾಗಿ ಕ್ರಮಶಿಕ್ಷಣ ಇಲ್ಲದ್ದಾಗಿ ಹೋಗುವುದರಿಂದ ಒಂದು ಹದ್ದು, ಆಚಾರ ಇಲ್ಲದೆ ಹೋಗಿ, ಕೊನೆಗೆ ಸಾಮಾನ್ಯ ಮನುಷ್ಯರು ಹಿಂದೂಮತವನ್ನು ಬಿಟ್ಟು ಇತರ ಮತಗಳೊಳಗೆ ಹೋಗುವುದು ನಡೆಯುತ್ತಿದೆ. ಕ್ರಮಶಿಕ್ಷಣ ಇಲ್ಲದ ಹಿಂದೂಮತದ ಮುಂದೆ ಕ್ರಮಶಿಕ್ಷಣ ಇರುವ ಕ್ರೈಸ್ತ, ಮುಸ್ಲಿಮ್ ಮತಗಳು ಕಾಣಿಸುತ್ತಿರುವಾಗ, ಬಹಳಜನ ಹಿಂದೂಗಳು ಆ ಮತಗಳೊಳಗೆ ಹೋಗುವುದು ನಡೆದಿದೆ. ಹಿಂದೂಗಳಲ್ಲಿ ತಮ್ಮ ಗುರುತಿಗೋಸ್ಕರ ಕೆಲವರೂ, ರಾಜಕೀಯ ಪ್ರಯೋಜನೆಗಳಿಗೋಸ್ಕರ ಕೆಲವರೂ, ಸಾಟಿ ಹಿಂದೂಗಳನ್ನು ಯಾವುದೊ ಒಂದು ನೆಪದಿಂದನಿಂದ ಬಾಧಿಸುತ್ತಿರುವಾಗ, ಹಿಂದೂಮತದ ಮೇಲೆ ಅಸೂಯೆ ಬಂದವರು ಕೆಲವರು ಇತರ ಮತಸ್ಥರಾಗಿ ಮಾರ್ಪಟ್ಟ ಸಂಘಟನೆಗಳು ಇವೆ.

ಮುಸ್ಲಿಮ್‌ರು ಪವಿತ್ರಯುದ್ಧವೆಂದು ಹೇಳುತ್ತಾ ಇತರ ಮತಸ್ಥರನ್ನೂ, ಅಲ್ಲಾನನ್ನು ವಿಶ್ವಾಸಿಸದವರನ್ನು, ಸಾಯಿಸುವುದು ಒಳ್ಳೆಯಕೆಲಸ ಅಲ್ಲವೆಂದು ಒಂದುಕಡೆ ಹೇಳುತ್ತಾ, ತಾವು ಸಹ ಅದೇ ಕೆಲಸವನ್ನು ಮಾಡಬೇಕೆಂದುಕೊಂಡ ಹಿಂದೂಗಳು ಕೆಲವರು, ಮತರಕ್ಷಣೆ ಸಂಘಗಳನ್ನು ಸ್ಥಾಪಿಸಿಕೊಂಡು, ಕೊನೆಗೆ ಮುಸ್ಲಿಮ್ ಜೀಹಾದಿಗಳು ಮಾಡಿದಂತೆ, ಇತರ ಮತದವರನ್ನು ಸಾಯಿಸದೆ, ತಮ್ಮ ಮತದವರನ್ನು ತಾವೇ ಸಾಯಿಸಿಕೊಳ್ಳುವುದು, ಅವರಿಗಿಂತ ನೀಚವಾದ ಕೆಲಸವನ್ನು ಮಾಡಿದಹಾಗೆ ಅಲ್ಲವೆ! ಜೀಹಾದಿಗಳು ಮಾಡುತ್ತಿರುವ ಕೆಲಸ

ಒಳ್ಳೆಯದೋ ಕೆಟ್ಟದೋ ಪಕ್ಕಕ್ಕಿಟ್ಟು, ಅವರು ಮಾಡಬೇಕೆಂದಿರುವುದು ಮಾಡುತ್ತಿದ್ದಾರೆ. ಹಿಂದೂಗಳು ಸಹ ಮತರಕ್ಷಣೆ ಕಾರ್ಯಗಳು ಮಾಡಬೇಕೆಂದು ಕೊಂಡು ಕೊನಗೆ ಮತಭಕ್ಷಣಾ ಕಾರ್ಯಗಳು ಮಾಡುತ್ತಿದ್ದಾರೆ. ಅಂತಹದರಲ್ಲಿ ಹಿಂದೂಗಳಿಗಿಂತ ಮುಸ್ಲಿಮ್‌ರೆ ಮತರಕ್ಷಣೆಯಲ್ಲಿ ಸಕ್ರಮವಾಗಿದ್ದಾರೆಂದು ತಿಳಿಯುತ್ತಿದೆ. ಈದಿನ ಹಿಂದೂ ಮತರಕ್ಷಣೆ ಸಂಘಗಳು ಹಿಂದೂತ್ವ ಎಂದರೆ ಏನೋ, ಹಿಂದೂ ಧರ್ಮಗಳು ಎಂದರೆ ಏನೋ ತಿಳಿಯದ ಸ್ಥಿತಿಯಲ್ಲಿದ್ದು, ಕೇವಲ ಮತವೆಂಬ ಮುಸುಗು ಹಾಕಿಕೊಂಡು ಕುರುಡರಂತೆ ಪ್ರವರ್ತಿಸುತ್ತಾ, ಹಿಂದೂ ಮತವನ್ನು ಸರ್ವನಾಶ ಮಾಡುತ್ತಿದ್ದಾರೆಂಬ ತಪನೆಯಿಂದ ನಾವು ಈ ವಿಷಯವನ್ನು ಇಷ್ಟು ಗಟ್ಟಿಯಾಗಿ ಹೇಳಬೇಕಾಗಿ ಬಂದಿದೆ.

ಹಿಂದೂಮತಕ್ಕೆ ದಿಶ, ನಿರ್ದಿಶಗಳು ಇವುಯೆಂದು ನಿಣರ್ಯಮಾಡಿ ತೋರಿಸುವವರು ಹಿಂದೂಮತದಲ್ಲಿನ ಗುರುಗಳು. ಎರಡುಸಾವಿರ ವರ್ಷಗಳ ಪೂರ್ವದಲ್ಲಿ ಆದಿಶಂಕರಾಚಾರ್ಯರು ಎಂಬುವ ಗುರು ಹಿಂದೂಮತದಲ್ಲಿ ಹುಟ್ಟಿ, ಆತನು ಹಿಂದೂತ್ವದಲ್ಲಿ ಅದ್ವೈತ ಸಿದ್ಧಾಂತವನ್ನು ಪ್ರತಿಪಾದಿಸಿ, ಪ್ರಚಾರ ಮಾಡಿ ಕೊನಗೆ ಜಗದ್ಗುರು ಆದಿಶಂಕರನು ಎಂದು ಹೆಸರು ಪಡೆದು 32 ವರ್ಷಗಳಿಗೆ ಮರಣಿಸಿದ್ದಾನೆ. ಆತನ ನಂತರ ವಿಶಿಷ್ಟಾದ್ವೈತ ಸಿದ್ಧಾಂತವನ್ನು ರಾಮಾನುಜಾಚಾರ್ಯರು ಹಿಂದೂಮತದಲ್ಲಿ ಸ್ಥಾಪಿಸಿ, 120 ವರ್ಷಗಳಿದ್ದು ಹಿಂದೂಮತದಲ್ಲಿ ವೈಷ್ಣವ ಗುರುವಾಗಿ ಹೆಸರುವಾಸಿಯಾಗಿದ್ದಾನೆ. ನಂತರ ಸ್ವಲ್ಪ ಕಾಲಕ್ಕೆ ಮಧ್ವಾಚಾರ್ಯರು ಬಂದು ಹಿಂದೂಮತದಲ್ಲಿ ದ್ವೈತ ಸಿದ್ಧಾಂತವನ್ನು ಪ್ರಚಾರ ಮಾಡಿಹೋಗಿದ್ದಾನೆ. ಇಲ್ಲಿಯವರೆಗೂ ಕಲಿಯುಗದಲ್ಲಿ ಮೂವರು ಗುರುಗಳು ಬಂದುಹೋಗುವುದು ನಡೆದಿದೆ. ಶಂಕರಾಚಾರ್ಯರು, ರಾಮಾನುಜಾ ಚಾರ್ಯರು ಸ್ಥಾಪಿಸಿರುವುದು ಅದ್ವೈತ ಸಿದ್ಧಾಂತವೇ ಆದರೂ ಸ್ವಲ್ಪಮಟ್ಟಿನ ವ್ಯತ್ಯಾಸ ಅದ್ವೈತ, ವಿಶಿಷ್ಟಾದ್ವೈತ ಎನ್ನುವ ಹೆಸರಿನಿಂದಿವೆ. ಮಧ್ವಾಚಾರ್ಯರು ದ್ವೈತ ಸಿದ್ಧಾಂತವನ್ನು ಸ್ಥಾಪಿಸಿದ್ದಾರೆ. ಅರ್ಥದ ಪ್ರಕಾರ ವಿವರಿಸಿ ಹೇಳಿಕೊಂಡರೆ ಅದ್ವೈತ ಎಂದರೆ ಒಂದುಯೆಂದು ಅರ್ಥ. ಹಾಗೆಯೇ ದ್ವೈತ ಎಂದರೆ

ಎರಡುಯೆಂದು ಅರ್ಥ. ವಿಶಿಷ್ಠಾದ್ವೈತ ಎಂದರೆ ವಿಶೇಷವಾದ ಒಂದು ಎಂದು ಅರ್ಥ. ಒಂದು ಮತ್ತು ವಿಶೇಷವಾದ ಒಂದು ಎರಡೂ ಒಂದೇ ಅಲ್ಲವೆ! ದ್ವೈತ ಎಂದರೆ ಎರಡು ಎಂದು ಹೇಳಿಕೊಂಡಿದ್ದೇವೆ. ಅದ್ವೈತ ಸಿದ್ಧಾಂತದಲ್ಲಿ ದೇವರನ್ನು ಒಬ್ಬನನ್ನೇ ತೋರಿಸುತ್ತಿದ್ದಾರೆ. ಮಧ್ವಾಚಾರ್ಯರ ದ್ವೈತದಲ್ಲಿ ಅಂದರೆ ಎರಡರಲ್ಲಿ ಒಂದು ದೇವರು, ಎರಡು ಜೀವಿ ಎಂದು ಎರಡು ಭಾಗಗಳನ್ನು ತೋರಿಸುತ್ತಿದ್ದಾರೆ. ಒಂದು, ಎರಡು ಸಿದ್ಧಾಂತಗಳು ಅಂದರೆ ದೇವರು ಮತ್ತು ಜೀವಿ ಎಂಬ ಎರಡು ಕಲಿಯುಗದಲ್ಲಿ ಎರಡುಸಾವಿರ ವರ್ಷಗಳ ಪೂರ್ವದಿಂದ ಬಂದಿವೆ.

ಕಲಿಯುಗ ಬಂದು ಸುಮಾರು ಐದುಸಾವಿರದ ನೂರಹದಿನೈದು ವರ್ಷಗಳಾಗಿದೆ. ಕಲಿಯುಗಕ್ಕೆಲ್ಲಾ ಮೂವರು ಗುರುಗಳು, ಎರಡು ಸಿದ್ಧಾಂತಗಳು ಹಿಂದೂಮತದಲ್ಲಿ ಬಂದಿವೆ. ಆದರೆ ಈದಿನ ಭೂಮಿಮೇಲೆ ಮೂರನೆ ಸಿದ್ಧಾಂತವನ್ನು ಪ್ರತಿಪಾದಿಸಿ ಪ್ರಚಾರ ಮಾಡುವ ನಾಲ್ಕನೇ ಗುರು ಪ್ರಸ್ತುತ ಕಾಲದಲ್ಲಿ ಪ್ರತ್ಯಕ್ಷವಾಗಿದ್ದಾನೆ, ಆತನೆ **ತ್ರೈತ ಸಿದ್ಧಾಂತ ಆದಿಕರ್ತ ಆಚಾರ್ಯ ಪ್ರಬೋಧಾನಂದ ಯೋಗಿಶ್ವರರೆಂದು ಹೇಳುತ್ತಿದ್ದೇವೆ.** ಈ ಗ್ರಂಥ ರಚಿಸಿರುವವರು ಸಹ ಆತನೆ. ಇಲ್ಲಿಯವರೆಗೂ ಕಲಿಯುಗದಲ್ಲಿ ಬಂದಿರುವ ಹಿಂದೂ ಗುರುಗಳು ಈತನನ್ನು ಸೇರಿಸಿ ನಾಲ್ಕುಜನರೆ ಆಗುತ್ತಾರೆ. ದೇಶದಲ್ಲಿನ ಉಳಿದ ಗುರುಗಳೆಲ್ಲರೂ ಇವರ ಸಿದ್ಧಾಂತಗಳನ್ನು ಅನುಸರಿಸಿ ಇರುವವರೆಯೆಂದು ತಿಳಿಯಬೇಕು. ಅರ್ಥವಾಗುವುದಕ್ಕೆ ಉದಾಹರಣೆಯಾಗಿ ವಿವರಿಸಿ ಹೇಳಿದರೆ ರಾಜಕೀಯ, ರಾಜ್ಯಾಂಗ ಒಂದೇ ಆದರೂ ಅದರಲ್ಲಿ ಕಾಂಗ್ರೆಸ್, ಕಮ್ಯಾನಿಸ್ಟು, ಭಾರತೀಯ ಜನತಾ, ತೆಲುಗುದೇಶಂ ಎಂಬ ಪಾರ್ಟಿಗಳಿರುವಂತೆ, ನಾಲ್ಕು ಪಾರ್ಟಿಗಳಿಗು ಪಾರ್ಟಿಯನ್ನು ಸ್ಥಾಪಿಸಿದವರು ನಾಲ್ವರಿರುವಹಾಗೆ, ಹಿಂದೂಮತದಲ್ಲಿ ಸಹ ನಾಲ್ವರು ಗುರುಗಳು, ಮೂರು ಸಿದ್ಧಾಂತಗಳು ಇವೆ. ಎರಡು ಸಿದ್ಧಾಂತಗಳನ್ನು ಪ್ರತಿಪಾದಿಸಿದ ಮೂವರು ಗುರುಗಳು ಕಾಲಗರ್ಭದಲ್ಲಿ ಬೆರೆತುಹೋದರೂ, ಅವರು ಪ್ರತಿಪಾದಿಸಿದ ಸಿದ್ಧಾಂತಗಳನ್ನು ನಂತರ ಎಷ್ಟು ಮಂದಿ ನಡೆಸಿದರೂ, ಆಚರಿಸಿದರೂ, ಸಿದ್ಧಾಂತಗಳನ್ನು ಸ್ಥಾಪಿಸಿದವರ ಹೆಸರುಗಳು ಸ್ಥಿರಸ್ಥಾಯಿಯಾಗಿ

ನಿಂತುಹೋಗುತ್ತವೆ. ಎರಡುಸಾವಿರ ವರ್ಷಗಳ ಕೆಳಗೆ ಮರಣಿಸಿದ ಆದಿಶಂಕರಾಚಾರ್ಯನನ್ನು ಇಂದಿಗೂ, ಎಂದಿಗೂ ಅದ್ವೈತ ಸಿದ್ಧಾಂತಕರ್ತ ನಾಗಿಯೇ ಹೇಳಿಕೊಳ್ಳುತ್ತಾರೆ. ಹಾಗೆಯೇ ದ್ವೈತ ಸಿದ್ಧಾಂತಕರ್ತನಾಗಿ ಮಧ್ವಾ ಚಾರ್ಯರನ್ನೆ ಹೇಳಿಕೊಳ್ಳುತ್ತೇವೆ. ಮೂರನೆಯ ಸಿದ್ಧಾಂತವಾದ ತ್ರೈತ ಸಿದ್ಧಾಂತಕರ್ತನಾಗಿ ಆಚಾರ್ಯ ಪ್ರಬೋಧಾನಂದಯೋಗಿಶ್ವರರ ಹೆಸರೆ ಶಾಶ್ವತವಾಗಿ ಇರುತ್ತದೆ.

ಅದ್ವೈತ, ವಿಶಿಷ್ಟಾದ್ವೈತ ಸಿದ್ಧಾಂತಗಳು ಅಲ್ಪಸ್ವಲ್ಪ ಎರಡೂ ಒಂದೇಯೆಂದು ಹೇಳಬಹುದು. ಐಸ್‌ಕ್ರಿಮ್, ಹಾಲಿನ ಐಸ್‌ಕ್ರಿಮ್ ಎಂದು ಹೇಳುವುದರಲ್ಲಿ ಎರಡೂ ಐಸ್‌ಕ್ರಿಮ್‌ಗಳೆ ಆದರೂ ಒಂದು ಸಾಧಾರಣ ಕಪ್ಪದು, ಎರಡನೆಯದು ಸ್ವಲ್ಪ ವಿಶೇಷ ಹೊಂದಿದ ಹಾಲಿನದು. ಅಷ್ಟೇ ಹೊರತು ಎರಡೂ ಐಸ್‌ಕ್ರಿಮ್‌ಗಳೇ ಎನ್ನುವಂತೆ, ಎರಡೂ ಅದ್ವೈತ ಸಿದ್ಧಾಂತಗಳೇ ಆಗಲಿ ಒಂದು ಸಾಧಾರಣ ವಾದುದು, ಮತ್ತೊಂದು ವಿಶೇಷತೆ ಇರುವುದೆಂದು ಗ್ರಹಿಸಬೇಕು. ಅದ್ವೈತ, ವಿಶಿಷ್ಟಾದ್ವೈತ ಸಿದ್ಧಾಂತಕರ್ತರಾದ ಆದಿ ಶಂಕರಾಚಾರ್ಯರು, ರಾಮಾನುಜಾ ಚಾರ್ಯರು ಇಬ್ಬರೂ ಬ್ರಾಹ್ಮಣರೆ. ಒಬ್ಬರನ್ನು ಮೀರಿದ ತಿಳುವಳಿಕೆ ಮತ್ತೊಬ್ಬರಿಗೆ ಇರುತ್ತಿತ್ತು. ಆದರೆ ಶಂಕರಾಚಾರ್ಯನು ಇಪ್ಪತ್ತು (20) ಗ್ರಂಥಗಳು ಬರೆದಿದ್ದಾನೆ. ಅವು ಕ್ರಮವಾಗಿ...

1) ಗೀತಾಭಾಷ್ಯ.
2) ಬ್ರಹ್ಮಸೂತ್ರ ಭಾಷ್ಯ
3) ವಿವೇಕ ಚೂಡಾಮಣಿ
4) ಉಪದೇಶ ಸಹಸ್ರಿ
5) ಅಪರೋಕ್ಷಾನುಭೂತಿ.
6) ಆತ್ಮಬೋಧ.
7) ವಾಕ್ಯಸುಧ.
8) ತತ್ತ್ವಬೋಧ.
9) ವಾಕ್ಯವ್ರಿತಿ.
10) ಪಂಚೀ ಕರಣ.
11) ಶಿವಾನಂದಲಹರಿ.
12) ಸೌಂದರ್ಯಲಹರಿ.
13) ನಿರ್ಗುಣ ಮಾನಸಪೂಜ
14) ಕನಕಧಾರ ಸ್ತೋತ್ರ.
15) ಭಜಗೋವಿಂದ.
16) ಭವಾನೀ ಅಷ್ಟಕ.

17) ನಿರ್ವಾಣ ಶತಕ. 18) ಸಾಧನಾ ಪಂಚಕ.

19) ಶಿವ ಮಾನಸ ಪೂಜ. 20) ಸಿದ್ಧಾಂತ ತತ್ತ್ವಬಿಂದು.

**ನಂತರ ಬಂದ ರಾಮಾನುಜಾಚಾರ್ಯರು ಒಂಭತ್ತು (9) ಗ್ರಂಥಗಳನ್ನು ಬರೆದಿದ್ದಾನೆ. ಅವು ಕ್ರಮವಾಗಿ.**

1) ವೇದಾಂತ ಸಂಗ್ರಹ. 2) ಶ್ರೀಭಾಷ್ಯ.

3) ಗೀತಾಭಾಷ್ಯ. 4) ವೇದಾಂತ ದೀಪ.

5) ವೇದಾಂತ ಸಾರ. 6) ಶರಣಾಗತಿ ಗದ್ಯ.

7) ಶ್ರೀರಂಗ ಗದ್ಯ. 8) ಶ್ರೀವಾಲಿಕುಂಟ ಗದ್ಯ.

9) ನಿತ್ಯಗ್ರಂಥ.

**ಆ ನಂತರ ಬಂದಿರುವ ಮಧ್ವಾಚಾರ್ಯರರು ಮೂವತ್ತೇಳು (37) ಗ್ರಂಥಗಳು ಬರೆದಿದ್ದಾರೆ. ಅವು ಕ್ರಮವಾಗಿ**

1) ಯಮಕ ಭಾರತ. 2) ಮಹಾಭಾರತತಾತ್ಪರ್ಯ ನಿರ್ಣಯ.

3) ಭಾಗವತ ತಾತ್ಪರ್ಯ ನಿರ್ಣಯ 4) ಕೃಷ್ಣಾಮೃತ ಮಹಾರ್ಣವ.

5) ಕೃಷ್ಣಜಯಂತಿ ನಿರ್ಣಯ. 6) ಸದಾಚಾರ ಸ್ಮೃತಿ.

7) ಯತಿ ಪ್ರಣವ ಕಲ್ಪ. 8) ತಂತ್ರಸಾರ ಸಂಗ್ರಹ.

**ಬ್ರಹ್ಮಸೂತ್ರಗಳ ಮೇಲೆ ನಾಲ್ಕು (4) ರಚನೆಗಳು :–**

1) ಬ್ರಹ್ಮಸೂತ್ರ ಭಾಷ್ಯ. 2) ಅನು ಭಾಷ್ಯ.

3) ಅನು ವ್ಯಾಖ್ಯಾನ. 4) ನ್ಯಾಯ ವಿವರ.

**ಭಗವದ್ಗೀತೆ ಮೇಲೆ ಎರಡು (2) ರಚನೆಗಳು :–**

**1) ಗೀತಾ ಭಾಷ್ಯ 2)ಗೀತಾ ತಾತ್ಪರ್ಯ ನಿರ್ಣಯ.**

**ಪ್ರಕರಣಗಳ ಮೇಲೆ ಹತ್ತು (10) ರಚನೆಗಳು :–**

1) ವಿಷ್ಣು ತತ್ವ ನಿರ್ಣಯ. 2) ತತ್ವ ಸಾಂಖ್ಯಾನ.

3) ತತ್ವೋದ್ಯೋತ. 4) ತತ್ವ ವಿವೇಕ.

5) ಪ್ರಮಾಣ ಲಕ್ಷಣ. 6) ಕಥ ಲಕ್ಷಣ.

7) ಕರ್ಮ ನಿರ್ಣಯ. 8)ಉಪಾಧಿ ಖಂಡನ.

9)ಪ್ರಪಂಚ ಮಿಥ್ಯತ್ವ ಅನುಮಾನ ಖಂಡನ 10) ಮಾಯವದ ಖಂಡನ.

**ಋಗ್ವೇದ ಮೇಲೆ ಒಂದು (1) ರಚನೆ :–**

1)ಋಗ್ ಭಾಷ್ಯ.

**ಉಪನಿಷತ್ತುಗಳ ಮೇಲೆ ಹತ್ತು (10) ರಚನೆಗಳು :–**

1) ಈಶಾವಾಸ್ಯ ಉಪನಿಷತ್ ಭಾಷ್ಯ. 2) ಕೇನೋ ಉಪನಿಷತ್ ಭಾಷ್ಯ.
3) ಕಠೋಪನಿಷತ್ ಉಪನಿಷತ್ ಭಾಷ್ಯ. 4) ಮುಂಡಕ ಉಪನಿಷತ್ ಭಾಷ್ಯ.
5) ಸತ್ಪ್ರಪ್ನ ಉಪನಿಷತ್ ಭಾಷ್ಯ. 6) ಮಂಡೂಕ್ಯ ಉಪನಿಷತ್ ಭಾಷ್ಯ.
7) ಐತರೇಯ ಉಪನಿಷತ್ ಭಾಷ್ಯ. 8) ತೈತ್ತರೇಯ ಉಪನಿಷತ್ ಭಾಷ್ಯ.
9) ಬೃಹಾದಾರಣ್ಯಕ ಉಪನಿಷತ್ ಭಾಷ್ಯ. 10)ಚಾಂದ್ಯೋಗ್ಯಉಪನಿಷತ್ ಭಾಷ್ಯ.

**ಸ್ತೋತ್ರಗಳ ಮೇಲೆ ಎರಡು (2) ರಚನೆಗಳು :–**

1) ದ್ವಾದಶ ಸ್ತೋತ್ರಗಳು 2) ನರಸಿಂಹ ನಖ ಸ್ತುತಿ.

ಪ್ರಸ್ತುತ ಕಾಲದಲ್ಲಿ ಆಚಾರ್ಯ ಪ್ರಬೋಧಾನಂದ ಯೋಗಿಶ್ವರರು ಈಗಾಗಲೇ ಐವತ್ತುನಾಲ್ಕು (54) ಗ್ರಂಥಗಳು ಬರೆದಿದ್ದಾರೆ. ಇನ್ನೂ ಬರೆಯಲ್ಪಡುವ ಗ್ರಂಥಗಳು ಇನ್ನೂ ಕೆಲವು ಇವೆ. ಒಟ್ಟು ಚತುರ್ ಷಷ್ಠಿ (64) ಗ್ರಂಥಗಳನ್ನು ಬರೆಯಬೇಕೆಂದುಕೊಂಡಿದ್ದಾರೆ. ಈ ವಿಧವಾಗಿ ನೋಡಿದರೆ ಗತದಲ್ಲಿನ ಮೂವರು ಜಗದ್ಗುರುಗಳಿಗಿಂತ ಮೂರನೆ ಸಿದ್ಧಾಂತವನ್ನು ತಿಳಿಸಿದ ನಾಲ್ಕನೆ ಗುರುವಾದ ಪ್ರಬೋಧಾನಂದಯೋಗಿಶ್ವರರು ಎರಡರಷ್ಟು ಇಲ್ಲವೆ ಮೂರರಷ್ಟು ಹೆಚ್ಚಾಗಿ ಗ್ರಂಥಗಳನ್ನು ಬರೆದಿದ್ದಾರೆಂದು ಹೇಳಬಹುದು. ಯೋಗಿಶ್ವರರ ರಚನೆಗಳ ಗ್ರಂಥಗಳ ಹೆಸರುಗಳು ಕ್ರಮವಾಗಿ ಹೀಗೆ ಇವೆ.

**01.** ತ್ರೈತ ಸಿದ್ಧಾಂತ ಭಗವದ್ಗೀತೆ.
**02.** ಆಧ್ಯಾತ್ಮಿಕ ಪ್ರಶ್ನೆ-ಉತ್ತರಗಳು.
**03.** ಧರ್ಮ-ಅಧರ್ಮ.
**04.** ಇಂದೂತ್ವವನ್ನು ಕಾಪಾಡೋಣ.
**05.** ಯಜ್ಞಗಳು (ಸತ್ಯವಾ-ಅಸತ್ಯವಾ?)
**06.** ದೆವ್ವಗಳಹಾಗೂ-ಭೂತಗಳ ಯಥಾರ್ಥಸಂಘಟನೆಗಳು.
**07.** ಸತ್ಯಾನ್ವೇಷಣಾ ಕಥೆ.
**08.** ಮಂತ್ರ-ಮಹಿಮೆ (ಸತ್ಯವಾ-ಅಸತ್ಯವಾ)
**09.** ಶ್ರೀ ಕೃಷ್ಣನು ದೇವರಾ, ಭಗವಂತನಾ.
**10.** ಗೀತಾ ಪರಿಚಯ.
**11.** ಕಲಿಯುಗ (ಎಂದಿಗೂ ಯುಗಾಂತವಲ್ಲ).
**12.** ಜನನ ಮರಣ ಸಿದ್ಧಾಂತ.
**13.** ಮರಣ ರಹಸ್ಯ.
**14.** ಪುನರ್ಜನ್ಮ ರಹಸ್ಯ.
**15.** ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
**16.** ಕಥೆಗಳ ಜ್ಞಾನ.
**17.** ಗಾದೆಗಳ ಜ್ಞಾನ.
**18.** ಒಗಟುಗಳಲ್ಲಿ ಜ್ಞಾನ.
**19.** ತತ್ತ್ವಗಳ ಜ್ಞಾನ.
**20.** ಬೈಗುಳಲ್ಲಿ ಜ್ಞಾನ- ಆಶೀರ್ವಾದಗಳಲ್ಲಿ ಅಜ್ಞಾನ.
**21.** ಗೀತಂ-ಗೀತ (ಹಾಡುಗಳ ಜ್ಞಾನ).
**22.** ತತ್ತ್ವಾರ್ಥ ಗೊಂಬೆಗಳ ಜ್ಞಾನ.
**23.** ದೇವಾಲಯ ರಹಸ್ಯಗಳು.
**24.** ಇಂದೂ ಸಂಪ್ರದಾಯಗಳು.
**25.** ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
**26.** ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ-ಅಶಾಸ್ತ್ರವಾ?)
**27.** ತಾಯಿ ತಂದೆ.
**28.** ಗುರುಪ್ರಾರ್ಥನಾಮಂಜರಿ.
**29.** ತ್ರೈತಾರಾಧನೆ.
**30.** ಸಮಾಧಿ.
**31.** ಪ್ರಬೋಧ.
**32.** ಸುಬೋಧ.
**33.** ಪ್ರಸಿದ್ಧ ಬೋಧನೆ.
**34.** ಸುಪ್ರಸಿದ್ಧಬೋಧನೆ.
**35.** ಸಿಲುಬೆ ದೇವರಾ?
**36.** ಮತಾತೀತ ದೇವರ ಮಾರ್ಗ.
**37.** ದೇವರ ಗುರುತು-963.
**38.** ಮತ-ಪಥ.
**39.** ಪ್ರಬೋಧಾನಂದ ನಾಟಕಗಳು.
**40.** ಇಂದೂ ಕ್ರೈಸ್ತವನಾ?
**41.** ನಿಗೂಢ ತತ್ತ್ವಾರ್ಥ ಬೋಧಿನಿ.
**42.** ಆತ್ಮ ಲಿಂಗಾರ್ಥ.
**43.** ನಾಸ್ತಿಕರು-ಆಸ್ತಿಕರು.
**44.** ಹೇತುವಾದ-ಪ್ರತಿವಾದ.
**45.** ಗುತ್ತಾ.
**46.** ಪ್ರಬೋಧ ತರಂಗಗಳು.
**47.** ತ್ರೈತ ಸಿದ್ಧಾಂತ.
**48.** ರೂಪ ಬದಲಾದ ಗೀತೆ.
**49.** ಉಪನಿಷತ್‌ಗಳಲ್ಲಿ ಲೋಪಗಳು.
**50.** ಪ್ರಥಮ ದೈವಗ್ರಂಥ ಭಗವದ್ಗೀತೆ.

**51.** ದ್ರಾವಿಡ ಬ್ರಾಹ್ಮಣ.
**52.** ತೀರ್ಪು.
**53.** ಕರ್ಮಪತ್ರ.
**54.** ಪ್ರವಕ್ತರು ಯಾರು?
**55.** ಧರ್ಮಶಾಸ್ತ್ರ ಯಾವುದು?
**56.** ಮತಾಂತರ ದೈವದ್ರೋಹ.
**57.** ತ್ರೈತಶಕ ಪಂಚಾಂಗ.
**58.** ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
**59.** ಜೀಹಾದ್ ಎಂದರೇ ಯುದ್ಧವಾ?
**60.** ಮೂರು ಗ್ರಂಥಗಳು, ಇಬ್ಬರು ಗುರುಗಳು.
**61.** ದೇವರ ಜ್ಞಾನ ಕಬ್ಜಾ ಆಗಿದೆ.
**62.** ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
**63.** ವಾರ್ತಕನು–ವರ್ತಕನು.
**64.** ದೇವರ ಚಿಹ್ನೆ.
**65** ಯಾವುದು ನಿಜವಾದ ಜ್ಞಾನ?
**66.** ಪ್ರತಿಮೆ x ವಿಗ್ರಹ – ದೈವ x ದೆವ್ವ.
**67.** ಮರಣದ ನಂತರ ಜೀವನ.
**68.** ಯಾವ ಮತದಲ್ಲಿ ಎಷ್ಟು ಮತ ದ್ವೇಷ.
**69.** ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
**70.** ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
**71.** ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
**72.** ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
**73.** ಇಂದೂ ಮತದಲ್ಲಿ ಸಿದ್ಧಾಂತಕರ್ತರು.
**74.** ಒಂದು ಮಾತು ಮೂರು ಗ್ರಂಥಗಳು.
**75.** ಲೂ ಎಂದರೇ ಏನು? (ತೆಲುಗು)
**76.** ಆದಿತ್ಯ.
**77.** ಗಿಡ ಮೊದಲಾ! ಬೀಜ ಮೊದಲಾ?
**78.** ಒಬ್ಬನೇ ಇಬ್ಬರು.
**79.** ಸಾಯಿಬಾಬಾ ದೇವರಾ! ಅಲ್ಲವಾ!
**80.** ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
**81.** ದೇವರ ಆಗಮನಕ್ಕೆ ಇದು ಸಮಯವಲ್ಲವೇ!
**82.** ವಿಶ್ವ ವಿದ್ಯಾಲಯ
**83.** ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
**84.** ಒರೆಗಲ್ಲು (ಗೀಟುರಾಯಿ)

ಗತದಲ್ಲಿ ಹಿಂದೂ ಸಿದ್ಧಾಂತಕರ್ತರಾದ ಮೂವರು ಜಗದ್ಗುರುಗಳು ಈದಿನ ನಾವು ನೋಡಬೇಕೆಂದರೂ ಕಾಣಿಸುವುದಿಲ್ಲ. ಆದರೆ ನಾಲ್ಕನೆ ಗುರು ತ್ರೈತ ಸಿದ್ಧಾಂತ ಆದಿಕರ್ತನಾದ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು ಈ ದಿನ ಸಜೀವವಾಗಿದ್ದಾರೆ. ಒಬ್ಬ ಸಿದ್ಧಾಂತಕರ್ತ ಭೂಮಿಮೇಲಿರುವಾಗ ಆತನಿಗೆ ಸಮಕಾಲಿಕರಾಗಿ ಇರುವವರು ಸ್ವಲ್ಪಮಟ್ಟಿಗೆ ಅದೃಷ್ಟವಂತರೆ ಎಂದು

ಹೇಳಬಹುದು. ಸುಮಾರು ನಾಲ್ಕುನೂರು ವರ್ಷಗಳ ಕೆಳಗೆ ಪೋತುಲೂರಿ ವೀರಬ್ರಹ್ಮಯ್ಯನವರು ತನ್ನ ಕಾಲಜ್ಞಾನದಲ್ಲಿ ಪ್ರಬೋಧಾನಂದ ಯೋಗೀಶ್ವರರ ಹೆಸರನ್ನು, ಪ್ರಬೋಧಾಶ್ರಮ ಹೆಸರನ್ನು ಬರೆದುಕೊಂಡಿದ್ದಾನೆ. ಅಷ್ಟೇ ಅಲ್ಲದೆ. **"ಸಿದ್ಧಾಂತ ಶಿರೋಮಣಿ"** ಎಂದು ಯೋಗೀಶ್ವರರನ್ನು ಹೇಳುತ್ತಾ ಯೋಗೀಶ್ವರರೆ ನನಗೂ ಗುರು, ನಿಮಗೂ ಗುರು ಎಂದು ಹೇಳುವುದು ಸಹ ನಡೆದಿದೆ. ಪೋತಲೂರಿ ವೀರಬ್ರಹ್ಮಯ್ಯನವರೆ ಸ್ವತಃವಾಗಿ ಯೋಗಿಶ್ವರರನ್ನು ತನಗೆ ಗುರುವೆಂದು ಹೇಳಿದ್ದಾನೆಂದರೆ, ಯೋಗೀಶ್ವರರು ತಿಳಿಸುವ ಜ್ಞಾನ ಉನ್ನತವಾಗಿರುತ್ತದೆಂದು ತಪ್ಪದೆ ಹೇಳಬೇಕಾಗುತ್ತದೆ. ಆದರೆ ಈ ದಿನ ಕ್ರಮಶಿಕ್ಷಣಾ ರಾಹಿತ್ಯವಾದ ಹಿಂದೂಮತದಲ್ಲಿ ಹುಟ್ಟುವುದರಿಂದ, ಅಜ್ಞಾನಿಗಳು ಆತನ ಶ್ರೇಷ್ಟತ್ವವನ್ನು ಸ್ವಲ್ಪವೂ ಗ್ರಹಿಸದೆ, ಹೇಳನವಾಗಿ ಸಹ ಮಾತನಾಡುವುದು ನಡೆಯುತ್ತಿದೆ. ದೈವ ಜ್ಞಾನವನ್ನಾಗಲಿ, ಹಿಂದೂಮತ ಧರ್ಮಗಳನ್ನಾಗಲಿ ಏನೂ ತಿಳಿಯದವರು ಹಿಂದೂತ್ವದಲ್ಲಿ ಸಿದ್ಧಾಂತಕರ್ತನಾಗಿ ಗತದಲ್ಲಿರುವ ಶಂಕರಾಚಾರ್ಯ ರಾಮಾನುಜಾ ಚಾರ್ಯ, ಮದ್ವಾಚಾರ್ಯರಿಗೆ ಸಮಾನ ಸ್ಥಾನದಲ್ಲಿದ್ದರೂ, ಅವರಿಗಿಂತ ಗ್ರಂಥಗಳನ್ನು ಹೆಚ್ಚಾಗಿ ಬರೆದರೂ, ಈ ದಿನ ಕ್ರಮಶಿಕ್ಷಣ ಇಲ್ಲದ ಹಿಂದೂಗಳು ಯಾರಿಗವರು ನಾವು ಜ್ಞಾನಿಗಳೆಂದುಕೊಳ್ಳುವವರು ಯೋಗೀಶ್ವರರನ್ನು ಹಿಂದುವೆ ಅಲ್ಲ ಎನ್ನುವುದು ಆಶ್ಚರ್ಯವಾದ ವಿಷಯ. ತ್ರೈತ ಸಿದ್ಧಾಂತ ಎಂಬ ಹೆಸರು ನೋಡಿ ಇದು ಕ್ರೈಸ್ತವವು ಎಂದು, ಯೋಗೀಶ್ವರರನ್ನು ಕ್ರೈಸ್ತನೆಂದು, ಆತನು ಪರಮತವಾದ ಕ್ರೈಸ್ತಮತವನ್ನು ಪ್ರಚಾರ ಮಾಡುತ್ತಿದ್ದಾನೆಂದು, ಆತನು ಹಿಂದೂಗಳ ಮುಸುಗಿನಲ್ಲಿರುವ ಕ್ರೈಸ್ತನು ಎನ್ನುವುದು ಒಂದುಕಡೆ ಆಶ್ಚರ್ಯ, ಮತ್ತೊಂದುಕಡೆ ದುಃಖವನ್ನು ಉಂಟುಮಾಡುವ ವಿಷಯವಾಗಿ ಇದೆ.

ದೇವರು ಅಮೃತವನ್ನು ಕೈಯಲ್ಲಿ ಒಯ್ದರೂ, ನೆಲದಪಾಲು ಮಾಡಿ ಕೊಳ್ಳುವುದು ಎಂದರೆ ಹೀಗೆ ಇರುತ್ತದೇನೊ! ದೇವರು ಮನುಷ್ಯರ ಹತ್ತಿರಕ್ಕೆ ತನ್ನ ಜ್ಞಾನವನ್ನು ಕಳಿಸಿದರೆ, ಅದನ್ನೆ ಇದು ಹಿಂದೂಗಳ ಜ್ಞಾನವಲ್ಲವೆಂಬ ಮನುಷ್ಯರನ್ನು ನೋಡಿದರೆ, 'ನಾಯಿಗೆ ತೆಂಗಿನಕಾಯಿ ಸಿಗುತ್ತದಾ!' ಎನ್ನುವ

ಗಾದೆ ನೆನಪಿಗೆ ಬಾರದೆ ಇರುವುದಿಲ್ಲ. ದೇವರು ತನಗೆ ಕೊಟ್ಟಿರುವ ಜ್ಞಾನವನ್ನು ಪ್ರಜೆಗಳಿಗೆ ಹಂಚಬೇಕೆಂಬ ಉದ್ದೇಶದಿಂದ ಯೋಗಿಶ್ವರರು ಗ್ರಂಥಗಳನ್ನು ಬರೆದು, ಅವುಗಳನ್ನು ಮನೆಮನೆ ತಿರುಗಿ ಪ್ರಚಾರ ಮಾಡಿರೆಂದು, ಪ್ರಜೆಗಳಿಗೆ ಜ್ಞಾನವನ್ನು ನೀಡಿರೆಂದು ಹೇಳಿದಾಗ, ಈ ದಿನ ಯೋಗೀಶ್ವರರ ಜ್ಞಾನವನ್ನು ಪ್ರಚಾರ ರಥದ ಮೂಲಕ ಆತನ ಶಿಷ್ಯರು ಪ್ರತಿಮನೆಯ ಬಾಗಿಲುವರೆಗು ತೆಗೆದುಕೊಂಡು ಹೋಗುತ್ತಿದ್ದಾರೆ. ಅದನ್ನು ನೋಡಿ ಹಿಂದೂತ್ವ ಎಂದಿಗೂ ಇಲ್ಲದ ರೀತಿಯಾಗಿ ಪ್ರಚಾರವಾಗುತ್ತಿದೆಂದು ಸಂತೋಷಪಡದೆ, ಹೀಗೆ ಪ್ರಚಾರ ಕ್ರೈಸ್ತರು ಹೊರತು ಯಾರೂ ಮಾಡುವುದಿಲ್ಲ, ಹಿಂದೂಗಳು ಅಸಲು ಮಾಡುವುದಿಲ್ಲ. ಆದ್ದರಿಂದ ಪ್ರಚಾರ ಮಾಡುವವರು ಕ್ರೈಸ್ತರೆಂದು ಅನ್ನುವುದು ನಡೆಯುತ್ತಿದೆ. ನಾವು ಭಗವದ್ಗೀತೆಯನ್ನು ಪ್ರಚಾರ ಮಾಡುತ್ತಿದ್ದೇವೆಂದು ಹೇಳಿದರೂ, ಭಗವದ್ಗೀತೆ ಯೆಂದರೆ ತಿಳಿಯದ ಅಜ್ಞಾನಿಗಳು ಅದನ್ನು ಭಗವದ್ಗೀತೆಯೆಂಬ ಹೆಸರಿನಲ್ಲಿರುವ ಬೈಬಲ್ ಗ್ರಂಥ ಎನ್ನುತ್ತಿದ್ದಾರೆ. ಗ್ರಂಥವನ್ನು ತೆರೆದು ನೋಡಿರಿ ಇದರಲ್ಲಿ ಏನಿದೆಯೋ ತಿಳಿಯುತ್ತದೆಂದರೆ, ಅದಕ್ಕೆ ಉತ್ತರವಾಗಿ ನಾವು ನಿಮ್ಮ ಗ್ರಂಥಗಳನ್ನು ಓದುವುದಿಲ್ಲ, ತ್ರೈತ ಎಂದರೆ ಕ್ರೈಸ್ತವವೇ ಎಂದು ನಮಗೆ ಚೆನ್ನಾಗಿ ತಿಳಿದಿದೆ. ಆದ್ದರಿಂದ ನೀವು ನಮ್ಮ ಊರಿನಲ್ಲಿ ನಿಮ್ಮ ಜ್ಞಾನವನ್ನು ಪ್ರಚಾರ ಮಾಡಬೇಡಿ ಎಂದು  ಹೇಳುವುದು ನಡೆಯುತ್ತಿದೆ.

ಗ್ರಂಥಗಳನ್ನು ಓದುವುದಿಲ್ಲ, ಹೇಳಿದರೆ ಕೇಳುವುದು ಸಹ ಕೇಳುವುದಿಲ್ಲ. "ನೀವು ಕ್ರೈಸ್ತರಾಗಿರುವುದು ನಮಗೆ ತಿಳಿದಿದೆ. ನಿಮ್ಮ ಜ್ಞಾನವನ್ನು ನಮ್ಮ ಊರಿನಲ್ಲಿ ಪ್ರಚಾರ ಮಾಡಬಾರದು. ನೀವು ನಮ್ಮ ಮಾತು ಕೇಳದಂತೆ ಪ್ರಚಾರ ಮಾಡಿದರೆ ನಿಮ್ಮ ಗ್ರಂಥಗಳನ್ನು ಬೆಂಕಿ ಇಟ್ಟು ಸುಟ್ಟುಹಾಕುತ್ತೇವೆ. ನಿಮ್ಮನ್ನು ಒಡೆದು ಕಳಿಸುತ್ತೇವೆ" ಎಂದು ಒರಟಾಗಿ ಮಾತನಾಡುವವರು ಸಹ ಕೆಲವರು ಇದ್ದಾರೆ. ಇಂತಹ ಅನುಭವಗಳು ಕೆಲವು ಊರುಗಳಲ್ಲಿ ಯೋಗೀಶ್ವರರ ಶಿಷ್ಯರಿಗೆ ಎದುರಾಗಿವೆ. **"ಕೈಯಲ್ಲಿ ಒಯ್ದ ಅಮೃತವನ್ನು ಕೆಳಗೆ ಒಯ್ದುಕೊಂಡರೆಂಬ"** ಗಾದೆ ಇವರಿಗಲ್ಲದೆ ಯಾರಿಗೆ ಅನ್ವಯಿಸುತ್ತದೆ ಹೇಳಿ? ಭಾರತಪ್ರಭುತ್ವ ಕೊಟ್ಟಿರುವ ಪೌರಹಕ್ಕುಗಳಲ್ಲಿ

ಭಾವ ಪ್ರಕಟನೆ ಸ್ವಾತಂತ್ರ್ಯ ಎಲ್ಲರಿಗೂ ಇದೆ. ಅದರಿಂದ ಪ್ರಜೆಗಳಿಗೆ ಅಗತ್ಯವಾದ ಜ್ಞಾನವನ್ನು ಹೇಳಬೇಡಿರಿ ಎನ್ನುವುದಾಗಲಿ, ಪ್ರಚಾರ ಮಾಡಬೇಡಿರೆಂದು ಹೇಳುವುದಾಗಲಿ ಕಾನೂನಿಗೆ ವಿರುದ್ಧವಾಗುತ್ತದೆ. ಆದರೂ ಕಾನೂನಿಗೆ ವಿರುದ್ಧವಾಗಿ ನಮ್ಮನ್ನು ಪ್ರಚಾರ ಮಾಡದಹಾಗೆ ಅಡ್ಡಿಯಾದ ಊರುಗಳು ಕೆಲವು ಇವೆ. ಅವುಗಳ ಹೆಸರುಗಳನ್ನು ಹೇಳಿದರೆ ಅಲ್ಲಿ ಎಂಥಹ ಜ್ಞಾನಿಗಳಿದ್ದಾರೋ ತಿಳಿಯಬಲ್ಲರು.

ಈ ದಿನ 14-10-2014 ಮಂಗಳವಾರ. ಇಲ್ಲಿಗೆ ವಾರ ದಿನಗಳ ಕೆಳಗೆ ಅಂದರೆ 05-10-2014 ಭಾನುವಾರ ಮಹಬೂಬ್‌ನಗರ್ ಜಿಲ್ಲೆ ಕಲ್ವಕುರ್ತಿಯಲ್ಲಿ ಸ್ವಲ್ಪವೂ ಜ್ಞಾನ ಪರಿಚಯವಿಲ್ಲದವರು, ಹಿಂದೂ ರಕ್ಷಣಾ ಸಂಘದಲ್ಲಿ ಕೆಲಸಮಾಡುತ್ತಿದ್ದೇವೆಂದು ಹೇಳುವವರು, ನಮ್ಮ ಪ್ರಚಾರ ರಥವನ್ನು ಅಡ್ಡಿಮಾಡುವುದು ನಡೆದಿದೆ. ಅವರು ನಾವು ಮಾಡುತ್ತಿರುವುದು ಕ್ರೈಸ್ತ ಬೋಧನೆಯೆಂದು ಆರೋಪಣೆ ಮಾಡುವುದು ನಡೆದಿದೆ. ನಮ್ಮ ಹತ್ತಿರವಿರುವ ಗ್ರಂಥಗಳೆಲ್ಲವನ್ನು ತೋರಿಸಿ ಇದರಲ್ಲಿ ಕ್ರೈಸ್ತಕ್ಕೆ ಸಂಬಂಧಿಸಿದ ಬೋಧನೆ ಏನಾದರೂ ಇದ್ದರೆ ತೋರಿಸಿರಿ. ಹಾಗೆ ತೋರಿಸಿದರೆ ಹತ್ತುಲಕ್ಷ ರೂಪಾಯಿಗಳನ್ನು ನಿಮಗೆ ಕೊಡುತ್ತೇವೆಂದು ಸಹ ನಮ್ಮವರು ಹೇಳುವುದು ನಡೆದಿದೆ. ಭಯ ಇಲ್ಲದಂತೆ ಹೋಗಿರುವ ಹಿಂದೂ ಮತದಲ್ಲಿ ಏನೂ ತಿಳಿಯದವನೂ ಸಹ ಎಲ್ಲಾ ತಿಳಿದಿದೆ ಎನ್ನುವಂತೆ, ಅಜ್ಞಾನಿಗಳು ಸಹ ದೊಡ್ಡ ಜ್ಞಾನಿಗಳಾಗಿ ಮಾತನಾಡುವುದು ಅಭ್ಯಾಸವಾಗಿಹೋಗಿದೆ. ನಮ್ಮವರ ಮಾತನ್ನು ಕೇಳದಂತೆ ದೌರ್ಜನ್ಯಕ್ಕೆ ಸಿದ್ಧವಾಗಿ ಪುಸ್ತಕಗಳು ಕಿತ್ತುಕೊಳ್ಳುವುದು ನಡೆದಿದೆ. ಅಲ್ಲಿಗೆ ಸುಮ್ಮನಾಗದೆ ನಮ್ಮ ಪ್ರಚಾರಕರಲ್ಲಿ ಒಬ್ಬರನ್ನು ಒಡೆಯುವುದು ಸಹ ನಡೆದಿದೆ. ಕೆಲವರು ಹೀಗೆ ದಾಳಿಮಾಡಿದರೆ, ಮತ್ತೆ ಕೆಲವರು ಪುಸ್ತಕಗಳನ್ನು ಹರಿದುಹಾಕುವುದು ನಡೆದಿದೆ. **"ಕೃಷ್ಣನು ದೇವರೆ, ಭಗವಂತನೆ"** ಎಂಬ ಗ್ರಂಥವನ್ನು, ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಮತ್ತೆ ಕೆಲವು ಗ್ರಂಥಗಳನ್ನು ಅರಿಯುವುದು ನಡೆದಿದೆ. ಆಗ ನಮ್ಮ ಪ್ರಚಾರಕರು ಅಲ್ಲಿಂದ ತಪ್ಪಿಸಿಕೊಂಡು ಓಡಿಹೋಗಿ ಕಲ್ವಕುರ್ತಿ ಪೊಲೀಸ್ ಸ್ಟೇಷನ್‌ನಲ್ಲಿ

ನಡೆದ ಸಂಘಟನೆಯನ್ನು ಕುರಿತು ಫಿರ್ಯಾದಿ ಸಲ್ಲಿಸುವುದು ನಡೆದಿದೆ. ಆಗ ಪೊಲೀಸರು ಮುಖ್ಯವಾಗಿ ಸಿ.ಐ.ನವರು ಶ್ರದ್ಧೆ ತೆಗೆದುಕೊಂಡು ಅವರಮೇಲೆ ಕೇಸು ದಾಖಲು ಮಾಡುವುದು ನಡೆದಿದೆ. ಇದೇ ರೀತಿ ನಲ್ಗೊಂಡ ಜಿಲ್ಲೆ ಭುವನಗಿರಿಯಲ್ಲಿಯೂ, ಕರ್ನೂಲ್ ಜಿಲ್ಲೆ ಮಹಾನಂದಿಯಲ್ಲಿಯೂ, ಅನಂತಪುರಂ ಜಿಲ್ಲೆ ಗುಂತಕಲ್‌ನಲ್ಲಿಯೂ  ರಂಗಾರೆಡ್ಡಿ ಜಿಲ್ಲೆ ಹೈದರಾಬಾದ್‌ನಲ್ಲಿಯೂ ದಿಲ್‌ಸುಖ್‌ನಗರ್‌ನಲ್ಲಿಯೂ ನಡೆದಿದೆ.

ಭಾರತ ರಾಜ್ಯಾಂಗ ಕೊಟ್ಟಿರುವ ಪೌರಹಕ್ಕುಗಳಲ್ಲಿ ಭಾವಪ್ರಕಟಣೆ ಮೊದಲನೆಯದಾಗಿರುವುದರಿಂದ ಯಾರು ಏನನ್ನಾದರೂ ಹೇಳಿಕೊಳ್ಳಬಹುದು. ದೇವಾಲಯಗಳು, ಪ್ರಾರ್ಥನಾಮಂದಿರಗಳಿಗೆ ಅರ್ಧಕಿಲೋಮಿಟರ್ ಪರಿದಿಯಲ್ಲಿ ಅಲ್ಲದೆ ಯಾರು ಯಾವ ಮತವನ್ನಾದರೂ ಪ್ರಚಾರ ಮಾಡಿಕೊಳ್ಳುವ ಹಕ್ಕು ಮನುಷ್ಯರಿಗಿದೆ. ಹಿಂದೂಗಳು ಕ್ರಿಶ್ಚಿಯನ್ ಚರ್ಚ್‌ಹತ್ತಿರ ಪ್ರಚಾರ ಮಾಡುವುದಾಗಲಿ, ಕ್ರೈಸ್ತರು ಹಿಂದೂಗಳ ದೇವಾಲಯಗಳ ಪರಿಧಿಯಲ್ಲಿ ಪ್ರಚಾರ ಮಾಡುವುದಾಗಲಿ ಕಾನೂನು ವಿರುದ್ಧವಾಗುತ್ತದೆ. ಅಷ್ಟೇಯಾಗಲಿ ಯಾರ ಜ್ಞಾನವನ್ನು ಅವರು ಪ್ರಚಾರ ಮಾಡಿಕೊಳ್ಳಬಹುದು. ಎಲ್ಲದಕ್ಕಿಂತ ದೊಡ್ಡ ವಿಚಿತ್ರ ಏನೆಂದರೆ ನಮ್ಮ ಪ್ರಚಾರವನ್ನು ಕ್ರೈಸ್ತರಾಗಲಿ, ಮುಸ್ಲಿಮ್‌ರಾಗಲಿ ಯಾರೂ ಇಲ್ಲಿಯವರೆಗೂ ಅಡ್ಡಿಯಾಗಲಿಲ್ಲ. ನಮ್ಮದು ಹಿಂದೂ ಜ್ಞಾನವೆಂದು ಭಗವದ್ಗೀತೆ ಪ್ರಚಾರವೆಂದು ತಿಳಿದರೂ ಅವರೆಲ್ಲರೂ ಎಲ್ಲಿಯೂ ವಿರುದ್ಧವಾಗಿ ಮಾತನಾಡುವುದಾಗಲಿ, ವಿರುದ್ಧವಾಗಿ ಪ್ರಚಾರಕ್ಕೆ ಅಡ್ಡಿಮಾಡುವುದಾಗಲಿ ಮಾಡಲಿಲ್ಲ. ಆದರೆ ನಾವು ಮಾಡುತ್ತಿರುವುದು ಹಿಂದೂಧರ್ಮಪ್ರಚಾರವೆಂದು ಹೇಳಿದರೂ ಕೇಳದಂತೆ ಹಿಂದೂಗಳೆಂದು, ಹಿಂದೂ ಧರ್ಮರಕ್ಷಣ ಸಂಘದಲ್ಲಿನ ಸಭ್ಯರೆಂದು ಹೇಳಿಕೊಳ್ಳುವವರು ಹೀಗೆ ಮಾಡುತ್ತಿದ್ದಾರೆಂದರೆ ಹಿಂದೂಮತದಲ್ಲಿ ಕ್ರಮಶಿಕ್ಷಣ ಇದೆಯಾ? ಗುರುಗಳೆಂದರೆ ಭಯವಿದೆಯಾ? ಎಂದು ಕೇಳುತ್ತಿದ್ದೇನೆ. ಗುಂತಕಲ್ಲಿನಲ್ಲಿ ಸರಸ್ವತಿ ವಿದ್ಯಾಮಂದಿರದ ಮುಂದೆ ಭಗವದ್ಗೀತೆಯನ್ನು ಬೆಂಕಿ ಇಟ್ಟು ಸುಟ್ಟ ಹಿಂದೂರಕ್ಷಕರನ್ನು ಹಿಂದೂ ಧರ್ಮರಕ್ಷಕರೆನ್ನಬೇಕೊ ಅಥವಾ ಹಿಂದೂ ಧರ್ಮ

ಭಕ್ಷಕರೆನ್ನಬೇಕೊ ನೀವೇ ಹೇಳಿರಿ. ತ್ರೈತ ಸಿದ್ಧಾಂತ ಎನ್ನುತ್ತಲೆ ಅದು ಕ್ರೈಸ್ತವವೆಂದು, ದೇವರು, ಸೃಷ್ಠಿಕರ್ತ ಎಂದು ಹೇಳಿದರೆ ಹಾಗೆ ಹೇಳುವುದು ಕ್ರೈಸ್ತರೆಯೆಂದು, ಹಿಂದೂಗಳು ಎನ್ನುತ್ತಿದ್ದಾರಂದರೆ ಅವರು ಎಂತಹ ಹಿಂದೂಗಳೊ ನೀವೇ ಹೇಳಿರಿ.

ಹಿಂದೂಗಳೆನ್ನುವವರು ಏಕೆ ಇಷ್ಟು ಅಜ್ಞಾನಿಗಳಾಗಿದ್ದಾರೆ? ಏಕೆ ಹಿಂದೂಧರ್ಮಪ್ರಚಾರವನ್ನು ತಡೆಗಟ್ಟಿ ದಾಳಿಗಳು ಮಾಡುತ್ತಿದ್ದಾರೆಂದು ಆಲೋಚಿಸಿದರೆ, ಮತ ರಕ್ಷಣೆ  ಮಾಡಿಕೊಳ್ಳಬೇಕೆಂಬ ತಾಪತ್ರಯ ಹೊರತು ಅವರಲ್ಲಿ ಮತ್ತೇನು ಇಲ್ಲವೆಂದು ತಿಳಿಯುತ್ತಿದೆ. ಮುಸ್ಲಿಮ್‌ರು ಮತರಕ್ಷಣೆಯಲ್ಲಿ ಭಾಗವಾಗಿ ಜೀಹಾದ್‌ಯೆಂದು (ಪವಿತ್ರ ಯುದ್ಧವೆಂದು) ಹೆಸರಿಟ್ಟುಕೊಂಡು ಇತರ ಮತಸ್ಥರನ್ನು ಸಾಯಿಸುತ್ತಿದ್ದಾರೆ. ಆದರೆ ಇಲ್ಲಿ ಹಿಂದೂಗಳಲ್ಲಿ ಸಹ ಮತರಕ್ಷಣೆಗೆ ಕೆಲವರು ಹಿಂದೂಧರ್ಮರಕ್ಷಣೆ ಸಂಘಗಳಲ್ಲಿ ಕೆಲಸಮಾಡುತ್ತಾ, ಇತರ ಮತಸ್ಥರ ಮೇಲೆ ದಾಳಿ ಮಾಡಬೇಕೆಂಬ ಉದ್ದೇಶದಿಂದ ಇರುವುದರಿಂದ, ಹಿಂದೂಗಳದು ಸಹ ಪವಿತ್ರಯುದ್ದವೇ ಎಂದು ಹೇಳಬಹುದು. ಮುಸ್ಲಿಮ್‌ರು ಜೀಹಾದ್‌ಯೆಂದು ಹೆಸರಿಟ್ಟು ಇತರರನ್ನು ಸಾಯಿಸುತ್ತಿದ್ದಾರೆ. ಹಿಂದೂಗಳು ಹೆಸರಿಟ್ಟುಕೊಳ್ಳದೆ ಜೀಹಾದನ್ನು ಮಾಡುತ್ತಿದ್ದಾರೆ. ಮುಸ್ಲೀಮ್‌ರು ಮಾಡಿದಂತೆ ಮಾಡಬೇಕೆಂಬ ಉದ್ದೇಶ ಹಿಂದೂಗಳಿಗಿದ್ದರೂ, ಮುಸ್ಲಿಮ್‌ರು ಇತರ ಮತಸ್ಥರನ್ನು ಗುರುತಿಸಿ ಅವರ ಹಿರಿಯರ, ಗುರುಗಳ ಆದೇಶಗಳ ಪ್ರಕಾರ ಕೆಲಸಮಾಡಿ ಇತರರನ್ನು ಸಾಯಿಸುತ್ತಿರುವಾಗ, ಹಿಂದೂಗಳು ಮಾತ್ರ ತಮ್ಮ ಹಿರಿಯರನ್ನಾಗಲಿ, ಗುರುಗಳನ್ನಾಗಲಿ ಆಶ್ರಯಿಸದೆ, ತಮಗೆ ತಾವೇ ಹಿರಿಯರೆಂದುಕೊಂಡು, ಸ್ವಮತವನ್ನು ಸಹ ಗುರುತಿಸಲಾರದ ಅಜ್ಞಾನದಲ್ಲಿದ್ದು, ಸ್ವಮತಸ್ಥರನ್ನೆ ಹಿಂಸಿಸುತ್ತಿದ್ದಾರೆಂದು ಹೇಳದೆ ತಪ್ಪುವುದಿಲ್ಲ. ನಾವು ಹಿಂದೂಗಳ ಧರ್ಮರಕ್ಷಣೆ ಎಂತಹದ್ದೊ ಪ್ರತ್ಯಕ್ಷ ಅನುಭವಪೂರ್ವಕವಾಗಿ ನೋಡಿದ್ದೇವೆ. ಧರ್ಮವೆಂದರೆ ಏನೋ ನಿರ್ವಚನವಾಗಲಿ, ಧರ್ಮವೆಂದರೆ ಏನೊ ವಿವರವಾಗಲಿ, ಸ್ವಲ್ಪಮಟ್ಟಿನ ಅರ್ಥವಾಗಲಿ ತಿಳಿಯದವರು ಹಿಂದೂ ಧರ್ಮ ರಕ್ಷಕರೆಂದು ಪ್ರಜೆಗಳ ಮೇಲೆ, ಸ್ವಮತದ ಮೇಲೆ ಅಪ್ರಕಟಿತ ಜೀಹಾದನ್ನು ಮಾಡುತ್ತಿದ್ದಾರೆಂದು ಹೇಳುತ್ತಿದ್ದೇವೆ.

ಈ ದಿನ ಕೆಲವು ಜಿಲ್ಲೆಗಳಲ್ಲಿ ನೂರಕ್ಕೆ ಎಂಭತ್ತರಷ್ಟು ಜನರು ಕ್ರೈಸ್ತರಾಗಿ ಬದಲಾಗಿಹೋಗಿದ್ದಾರೆ. ಉಳಿದ ಜಿಲ್ಲೆಗಳಲ್ಲಿ ಸಹ ಅಂತಹ ಪರಿಸ್ಥಿತಿ ಬರ ಬಹುದು. ಹಿಂದೂರಕ್ಷಣೆ ಹೇಗೆ ಮಾಡಬೇಕೊ ತಿಳಿಯದವರು ಹಿಂದೂ ರಕ್ಷಕರಾಗಿದ್ದಾರೆ. ಹಾಗೆ ಆಗುವುದರಿಂದ ಹಿಂದೂಮತಕ್ಕೆ ನಷ್ಟ ಹೊರತು ಲಾಭ ಏನೂ ಇಲ್ಲ. ಹಿಂದೂಮತ ಕ್ಷೀಣಿಸದಂತೆ ಇರಬೇಕೆಂದರೆ ಹಿಂದೂರಕ್ಷಣೆಗಿಂತ ಮೊದಲು ಹಿಂದೂಧರ್ಮ ಪ್ರಚಾರ ಒಳ್ಳೆಯದು. ಕ್ರೈಸ್ತರು ಮತಪ್ರಚಾರ ಹೊರತು ಮತರಕ್ಷಣೆ ಮಾಡಲಿಲ್ಲ. ಅವರು ಅವರ ಮತ ಪ್ರಚಾರದಿಂದ ಮತವನ್ನು ಕೆಲವು ಜಿಲ್ಲೆಗಳಲ್ಲಿ 80ರಷ್ಟು ಹೆಚ್ಚಿಸಿಕೊಂಡಿದ್ದಾರೆ. ಮುಸ್ಲಿಮ್‌ರು ಒಂದು ಕಡೆ ಮತಪ್ರಚಾರ, ಒಂದುಕಡೆ ಮತರಕ್ಷಣೆ ಮಾಡುತ್ತಿದ್ದರೂ, ಪ್ರಪಂಚದಲ್ಲಿಯೇ ಅತ್ಯುತ್ತಮ ಕ್ರಮಶಿಕ್ಷಣ ಇರುವ ಮತವಾಗಿ ಮುಸ್ಲಿಮ್ ಮತ (ಇಸ್ಲಾಮ್) ಹೆಸರುಹೊಂದಿದೆ. ಆ ಲೆಕ್ಕಪ್ರಕಾರ ನೋಡಿದರೆ ಪ್ರಪಂಚದಲ್ಲಿ ಯಾವ ಮತದಲ್ಲಿ ಇಲ್ಲದಷ್ಟು ಕ್ರಮಶಿಕ್ಷಣಾರಾಹಿತ್ಯ ಹಿಂದೂಮತದಲ್ಲಿ ಇದೆಯೆಂದು ಹೇಳಬಹುದು. ಕ್ರಮಶಿಕ್ಷಣ ಇಲ್ಲದಿರುವುದರಿಂದ, ಗುರುಗಳ ಆಜ್ಞೆಯಲ್ಲಿ ಕೆಲಸಮಾಡದಿರುವು ದರಿಂದ, ಯಾರಿಗವರು ಮತದಲ್ಲಿ ನಾನೇ ದೊಡ್ಡವನು ಎಂದುಕೊಳ್ಳುವುದರಿಂದ, ಅಗ್ರಕುಲದವರು ಸ್ವಾರ್ಥ ಬುದ್ಧಿಯನ್ನು ಉಪಯೋಗಿಸಿ ತಾವೇ ಗುರುಗಳು ಎಂದುಕೊಳ್ಳುವುದರಿಂದ, ಹಿಂದೂ ಧರ್ಮಗಳಾವುವೊ ಸ್ವಲ್ಪವೂ ಸಹ ತಿಳಿಯದವರು ಮತರಕ್ಷಣೆ ಎನ್ನುವ ಮುಸುಗು ಹಾಕಿಕೊಂಡು ತನ್ನವರ್‍ಯಾರು, ಬೇರೆಯವರು ಯಾರೆಂದು ತಿಳಿಯದಹಾಗೆ ದಾಳಿಗಳು ಮಾಡುವುದರಿಂದ, ಹಿಂದೂಗಳ ಮೂಲಗ್ರಂಥ ಯಾವುದೋ ಹಿಂದೂಗಳಿಗೆ ತಿಳಿಯದೆ ಹೋಗಿರುವುದರಿಂದ, ಭಗವದ್ಗೀತೆಯನ್ನು ನೋಡದವರು, ಓದದವರು ಹಿಂದೂ ಮತದಲ್ಲಿ ಮತಹಿರಿಯರಾಗಿ ಚಲಾವಣೆ ಆಗುವುದರಿಂದ, ಹಿಂದೂಧರ್ಮಗಳನ್ನು ತಿಳಿಸುತ್ತಾ, ಹಿಂದೂ ಮತಕ್ಕೆ ದಿಶಾ ನಿರ್ಣಯಮಾಡುವ ಗುರುಗಳನ್ನು ಗುರುತಿಸದೆ ಇರುವುದರಿಂದ, ಹಿಂದೂಮತ ಸಿದ್ಧಾಂತಕರ್ತರನ್ನು ಸಹಿತವು ಕೀಳಾಗಿ ನೋಡುವು ದರಿಂದ, ಹೀಗೆ ಅನೇಕ ಕಾರಣಗಳಿಂದ ಹಿಂದೂಮತ ಕ್ಷೀಣಿಸುವುದಕ್ಕೆ ಪ್ರಾರಂಭವಾಗಿದೆ. ಮೇಲೆ ಹೇಳಿರುವ ತಪ್ಪುಗಳನ್ನೆಲ್ಲ ಹಿಂದೂಗಳು

ಸರಿಮಾಡಿಕೊಳ್ಳದೆಹೋದರೆ ಕ್ಷೀಣದಶೆಯಲ್ಲಿರುವ ಹಿಂದೂಮತ ಸ್ವಲ್ಪಕಾಲಕ್ಕೆ ಪೂರ್ತಿ ಕಣ್ಮರೆಯಾಗಿ ಹೋಗಬಲ್ಲದು. ಆದ್ದರಿಂದ ಈಗಲಾದರೂ ಹಿಂದೂಗಳು ಅಜ್ಞಾನನಿದ್ರೆಯಿಂದ ಎಚ್ಚರಗೊಂಡು, ತಮ್ಮ ಸಂಸ್ಕೃತಿಯನ್ನು ಕಾಪಾಡಿಕೊಂಡು, ತಮ್ಮ ಗುರುಗಳನ್ನು ಆಯ್ಕೆ ಮಾಡಿಕೊಂಡು, ಅವರ ಸನ್ಮಾರ್ಗದಲ್ಲಿ ಹಿಂದೂತ್ವವನ್ನು ನಡೆಸಿಕೊಂಡರೆ ಹಿಂದೂಮತ ಪುನಃ ಉಜ್ವಲಗೊಳ್ಳುತ್ತದೆ.

ಈ ಗ್ರಂಥದ ಹೆಸರು **"ಜೀಹಾದ್ ಎಂದರೆ ಯುದ್ಧವಾ?"** ಎಂದು ಇರುವುದರಿಂದ, ಹಿಂದೂಗಳು ಸಹ ಮುಸ್ಲಿಮ್‌ರು ಮಾಡುವ ಜೀಹಾದ್ ನಂತಹ ದಾಳಿಗಳು ಮಾಡುವುದರಿಂದ, ಜೀಹಾದ್ ಎನ್ನುವುದು ಎಷ್ಟರಮಟ್ಟಿಗೆ ಸಮಂಜಸವಾದುದೆಂದು ಜೀಹಾದ್‌ದೊಂದಿಗೆ ಯಾವ ಸಂಬಂಧವಿಲ್ಲದ ಕ್ರೈಸ್ತರು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಸಮಾಧಾನ ಹೀಗೆ ಇದೆ. ಹಿಂದೂ, ಮುಸ್ಲಿಮ್, ಕ್ರೈಸ್ತರಲ್ಲಿ ಹಿಂದೂಗಳಲ್ಲಿ, ಮುಸ್ಲಿಮ್‌ರಲ್ಲಿ ಜೀಹಾದ್ ಎನ್ನುವುದು ಇದೆ. ಜೀಹಾದ್ ಎನ್ನುವುದು ಮುಸ್ಲಿಮ್‌ರಲ್ಲಿ ಕೆಲವರು ದೊಡ್ಡದಾಗಿ ಹೇಳಿಕೊಳ್ಳುತ್ತಾರೆ. ಹಿಂದೂ ಗಳಲ್ಲಿ ಜೀಹಾದ್ ಎಂಬ ಹೆಸರು ಇಲ್ಲದಿದ್ದರೂ, ಮುಸ್ಲಿಮ್‌ರಲ್ಲಿ ಇರುವ ಜೀಹಾದನ್ನು ಹೋಲಿದ ಕಾರ್ಯಗಳಾದ ದಾಳಿಗಳನ್ನು ಹಿಂದೂಗಳು ಮಾಡುತ್ತಿದ್ದಾರೆ. ಕ್ರೈಸ್ತರು ಮಾಡದಿರುವುದನ್ನು ಮುಸ್ಲಿಮ್‌ರು ಹೆಸರು ಹೇಳಿ ಮಾಡುತ್ತಿದ್ದಾರೆ. ಹಿಂದೂಗಳು ಹೆಸರು ಹೇಳದಂತೆ ಮಾಡುತ್ತಿದ್ದಾರೆ. ಜೀಹಾದ್ ಎನ್ನುವುದನ್ನು ದೇವರು ಎಲ್ಲಿಯಾದರೂ ತನ್ನ ಗ್ರಂಥಗಳಲ್ಲಿ ಹೇಳಿದ್ದಾನಾ ಎಂದು ನೋಡಿದರೆ, ಯಾವ ಗ್ರಂಥದಲ್ಲಾಗಲಿ ಆ ಹೆಸರು ಎಲ್ಲಿಯೂ ಪ್ರಸ್ತಾವನೆಗೆ ಬರಲಿಲ್ಲ. ಆದರೂ ಮುಸ್ಲಿಮ್‌ರು ಅದನ್ನು ದೇವರಿಗೋಸ್ಕರ ಮಾಡುವ ಕಾರ್ಯ ವೆಂದು ಮಾಡುತ್ತಿದ್ದಾರೆಂದರೆ, ಎಲ್ಲಿಯೋ ಅವರು ತಪ್ಪುದಾರಿ ಹಿಡಿಸಿದ್ದಾರೆಂದು ತಿಳಿಯುತ್ತಿದೆ. ಸಾಧಾರಣ ಮುಸ್ಲಿಮರನ್ನು ತಪ್ಪುದಾರಿ ಹಿಡಿಸಿರುವುದು ಅವರ ಮತಬೋಧಕರೆಯೆಂದು ನಾವು ಮೊದಲೇ ಹೇಳಿಕೊಂಡಿದ್ದೇವೆ. ಅವರ ಮತಬೋಧಕರೆ ಮುಸ್ಲಿಮರನ್ನು ತಪ್ಪುದಾರಿ ಹಿಡಿಸಿದ್ದಾರೆನ್ನುವುದಕ್ಕೆ ನಮ್ಮ ಹತ್ತಿರ ಒಂದು ಸಾಕ್ಷ್ಯವಿದೆ. ಅದೇನೆಂದರೆ! ಈ ಮಧ್ಯಕಾಲದಲ್ಲಿ ಕಂಪ್ಯೂಟರ್‌ನಲ್ಲಿನ

ಫೇಸ್‌ಬುಕ್ ಎಂಬ ವೆಬ್‌ಸೈಟ್‌ನಲ್ಲಿ ಹೊಸದಾಗಿ ಜ್ಞಾನವನ್ನು ತಿಳಿದುಕೊಳ್ಳುವ ಒಬ್ಬ ಹಿಂದೂ, "ಜೀಹಾದ್ ಎಂಬ ಹೆಸರಿನಿಂದ ಮನುಷ್ಯರ ಪ್ರಾಣಗಳನ್ನು ತೆಗೆಯುವುದು ಒಳ್ಳೆಯದಾ? ದೇವರು ಅದನ್ನು ಒಪ್ಪಿಕೊಳ್ಳುತ್ತಾನಾ?" ಎಂದು ಪ್ರಶ್ನಿಸಿದ್ದಾನೆ. ಆ ಪ್ರಶ್ನೆಗೆ ಮುಸ್ಲಿಮ್ ಮತ ಪ್ರಚಾರ ಸಂಘದವರು (ಆ ಸಂಘಗಳ ಹೆಸರುಗಳು ಇಲ್ಲಿ ಬರೆಯಲಿಲ್ಲ.) ಕಂಪ್ಯೂಟರ್‌ನಲ್ಲಿಯೇ ಸಮಾಧಾನ ಕೊಟ್ಟಿದ್ದಾರೆ.

ಫೇಸ್‌ಬುಕ್‌ನಲ್ಲಿ ಅವರು ಕೊಟ್ಟಿರುವ ಸಮಾಧಾನ ಹೀಗೆ ಇದೆ. "ಜೀಹಾದನ್ನು ಕುರಿತು ಮಾತನಾಡುತ್ತಾ ದೇವರು ಮನುಷ್ಯರನ್ನು ಸಾಯಿಸೆಂದು ಹೇಳಿದ್ದಾನಾ? ದೇವರು ಅದನ್ನು ಒಪ್ಪಿಕೊಳ್ಳುತ್ತಾನಾ? ಎಂದು ಪ್ರಶ್ನಿಸಿದ್ದಾರೆ. ನಾವು ದೇವರು ಹೇಳಿದ ಕೆಲಸವನ್ನೇ ಮಾಡುತ್ತಿದ್ದೇವೆ. ಜೀಹಾದ್ ಎನ್ನುವುದು ದೇವರಿಗೋಸ್ಕರ ಮಾಡುವ ಪವಿತ್ರಯುದ್ಧವೆಂದು ನೀವು ಮರೆಯಬಾರದು. ನಿಮಗೆ ಈ ವಿಷಯ ಎಲ್ಲಿ ಬರೆದಿದ್ದಾರೆ ಎಂದು ಅನುಮಾನವಿದ್ದರೆ ಪವಿತ್ರಖುರ್‌ಆನ್ ಗ್ರಂಥದಲ್ಲಿ **"ಅತ್ ತೌಬಾ" ಎಂಬ 9ನೇ ಸೂರಾದಲ್ಲಿ 5ನೇ ಆಯತ್‌ನಲ್ಲಿ** ನೋಡಿರಿ. ಮನುಷ್ಯರ ಕತ್ತುಗಳನ್ನು ಕತ್ತರಿಸಿರೆಂದು ದೇವರು ಹೇಳಿದಹಾಗೆ ನಿಮಗೆ ಅರ್ಥವಾಗುತ್ತದೆ" ಎಂದು ಬರೆದಿಟ್ಟಿದ್ದಾರೆ. ಫೇಸ್‌ಬುಕ್‌ನಲ್ಲಿ ಅವರ ಸಮಾಧಾನವನ್ನು ಓದಿದ ಹಿಂದೂ ಆ ವಿಷಯವನ್ನು ನನ್ನ ಹತ್ತಿರ ಕೇಳುವುದು ನಡೆದಿದೆ. ದೇವರೇ ಸ್ವತಃವಾಗಿ ಮನುಷ್ಯರನ್ನು ಸಾಯಿಸೆಂದು ಹೇಳಿರುತ್ತಾನಾ? ಎಂದು ನನ್ನನ್ನು ಆತನು ಪ್ರಶ್ನಿಸುವುದಾಗಿದೆ. ಅದಕ್ಕೆ ದೇವರು ಯಾವ ಸಂದರ್ಭದಲ್ಲಿ ಹಾಗೆ ಹೇಳಿದ್ದಾನೊ ನೋಡಿ ಹೇಳುತ್ತೇನೆಂದು ನಾನು ಹೇಳಿದೆನು. ನಂತರ ಬಿಡುವಿನ ಸಮಯದಲ್ಲಿ **9ನೇ ಸೂರಾದಲ್ಲಿ 5ನೇ ಆಯತ್‌ನ್ನು** ನೋಡಿದೆನು. ಅದನ್ನು ನೋಡಿದವರು ಯಾರಾದರೂ ದೇವರು ಇತರ ಮತಸ್ಥರನ್ನು ಸಾಯಿಸೆಂದು ಹೇಳಿದ್ದಾನೆಂದು ಹೇಳುತ್ತಾರೆ. ಆದರೆ ಆ ವಾಕ್ಯದ ಕೊನೆಯಲ್ಲಿ **"ನಿಶ್ಚಯವಾಗಿ ಅಲ್ಲಾ ಕ್ಷಮಿಸುವವನು, ಅಪಾರಕರುಣಾಮಯನು"** ಎಂದು ಇದೆ. ವಾಕ್ಯದ ಕೊನೆಯಲ್ಲಿರುವ ದೇವರು ಕ್ಷಮಾಶೀಲನು, ಕರುಣಾಮಯನು ಎಂಬ

ಮಾತಿಗೆ ಮೇಲೆ ಸಾಯಿಸೆಂದು ಹೇಳಿದಮಾತಿಗೆ ಸ್ವಲ್ಪವೂ ಹೋಲಿಕೆ ಇಲ್ಲ. ಒಂದು ಉತ್ತರ, ಒಂದು ದಕ್ಷಿಣಗಳಾಗಿವೆ, ಆಗ ಆ ವಾಕ್ಯವನ್ನು ಕುರಿತು ಸ್ವಲ್ಪ ಯೋಚಿಸಬೇಕಾದ ಕೆಲಸ ಏರ್ಪಟ್ಟಿದೆ.

ಇದಕ್ಕೂ ಮೊದಲೇ ದೇವರ ಜ್ಞಾನವನ್ನು ದೇವರ ವಾಕ್ಯಗಳನ್ನು ಸ್ಥೂಲ ಅರ್ಥದಿಂದ ತೆಗೆದುಕೊಳ್ಳಬಾರದು ಎಂದು ಹೇಳಿದ್ದೇವೆ. **ದೇವರ ಜ್ಞಾನ 75 ರಷ್ಟು ಮೋಕ್ಷವಾಗಿ (ಮುತಷಾಭಿಹಾತ್ ಆಗಿ) ಇದೆಯೆಂದು, ಕೇವಲ 25 ರಷ್ಟು ಮಾತ್ರ ಸ್ಥೂಲವಾಗಿ (ಮುಹ್ಕಮಾತಾಗಿ) ಇದೆಯೆಂದು ಹೇಳಿಕೊಂಡಿದ್ದೇವೆ. ಇಲ್ಲಿ 9ನೇ ಸೂರಾ, 5ನೇ ಆಯತ್ತನ್ನು** ಸ್ಥೂಲವಾಗಿ ತೆಗೆದುಕೊಳ್ಳಬಾರದು. ಸ್ಥೂಲವಾಗಿ ಅರ್ಥಮಾಡಿಕೊಂಡರೆ ವಾಕ್ಯ ಕೊನೆಯಲ್ಲಿರುವ ದೇವರು ಕ್ಷಮಿಸುವವನು, ಕರುಣೆ ಇರುವವನು ಎಂಬ ಮಾತು ತಪ್ಪಾಗುತ್ತದೆ, ಅಥವಾ ಅಸತ್ಯವಾಗುತ್ತದೆ. ಕ್ಷಮಿಸುವವನು, ಕರುಣಿಸುವವನು ಯಾರಾಗಲಿ ಮನುಷ್ಯರನ್ನು ಮನುಷ್ಯರೆ ಸಾಯಿಸೆಂದು ಹೇಳುವುದಿಲ್ಲ. ಆದ್ದರಿಂದ ಕ್ಷಮಿಸುವವನು ಕರುಣಿಸುವವನು ಸತ್ಯವಾದರೆ ಮನುಷ್ಯರನ್ನು ಮನುಷ್ಯರೆ ಸಾಯಿಸೆಂದು ಹೇಳಿದ ಮಾತು ಅಸತ್ಯವಾಗುತ್ತದೆ. ಸಾಯಿಸೆಂದು ತನ್ನ ಮುಸ್ಲಿಮ್‌ರಿಗೆ ಅಲ್ಲಾ ಹೇಳಿದ್ದರೆ ಕೊನೆಯಲ್ಲಿ ದೇವರು ಕ್ಷಮಿಸುವವನು, ಕರುಣಿಸುವವನು ಎಂದು ಹೇಳಿರುವುದಿಲ್ಲ. ಇಲ್ಲಿ ತಪ್ಪು ಭಾವನೆಯನ್ನು ಅರ್ಥಮಾಡಿಕೊಳ್ಳುವ ಅವಕಾಶವಿದೆ. ಆದ್ದರಿಂದ ಈ ವಾಕ್ಯದ ಕೊನೆಯಲ್ಲಿ ದೇವರು ಕ್ಷಮಿಸುವವನು, ಕರುಣಿಸುವವನು ಎಂದು ಹೇಳುವುದು ನಡೆದಿದೆ. ಅಲ್ಲಿ **9ನೇ ಸೂರಾದಲ್ಲಿ 5ನೇ ವಾಕ್ಯದಲ್ಲಿ** ಈ ವಿಧವಾಗಿ ಇದೆ. **"ನಿಷಿದ್ಧ ಮಾಸಗಳು ಕಳೆದುಹೋದ ನಂತರ ಕೆಟ್ಟಮಾರ್ಗದಲ್ಲಿ ಹೋಗುವವರನ್ನು, ಮುಷ್ರಿಕ್ಕರನ್ನು(ಕಪಟರನ್ನು) ಮಾತು ತಪ್ಪಿದವರನ್ನು ಎಲ್ಲಿ ದೊರೆತರೆ ಅಲ್ಲಿ ಸಾಯಿಸಿರಿ ಮತ್ತು ಅವರನ್ನು ಹಿಡಿದುಕೊಳ್ಳಿ, ಇನ್ನೂ ಅವರನ್ನು ಸುತ್ತುಮುಟ್ಟಿರಿ ಮತ್ತು ಪ್ರತಿಮೊಟಿನಲ್ಲಿ ಅವರಿಗಾಗಿ ಕಾದುಕೊಂಡಿರಿ. ಆದರೆ ಅವರು ಪಶ್ಚಾತ್ತಾಪಪಟ್ಟು ನಮಾಜ್ ಸ್ಥಾಪಿಸಿ ಜಕಾತ್ ಕೊಟ್ಟರೆ ಅವರನ್ನು ಅವರ ಮಾರ್ಗದಲ್ಲಿ ಬಿಟ್ಟುಬಿಡಿ. ನಿಶ್ಚಯವಾಗಿ ಅಲ್ಲಾ ಕ್ಷಮಾಶೀಲನು, ಕರುಣಿಸುವವನು."** ಎಂದು ಇದೆ.

ಇಲ್ಲಿ ಈ ಸೂರಾದಲ್ಲಿ ಏನಿದೆಯೋ ಚೆನ್ನಾಗಿ ಆಲೋಚಿಸಿದರೆ, ಜೀಹಾದ್‌ಗೂ ಈ ಆಯತ್‌ಗೂ ಸ್ವಲ್ಪವೂ ಸಂಬಂಧವಿಲ್ಲ. ಅಷ್ಟೇಅಲ್ಲದೆ ಈ ವಾಕ್ಯದಲ್ಲಿ ಬಹಳ ತಿಳುವಳಿಕೆಯುಳ್ಳ ಮೇಧಾವಿಗಳು ಸಹ ತಪ್ಪು ಭಾವದಲ್ಲಿ ಬಿದ್ದುಹೋಗಿದ್ದಾರೆ. ಯಾರು ಯಾರನ್ನು ಸಾಯಿಸಬೇಕೆಂದು ದೇವರು ಹೇಳಿದ್ದಾನೋ ಸ್ವಲ್ಪವೂ ಒಬ್ಬರೂ ಸಹ ಆಲೋಚಿಸಲಿಲ್ಲ. ಈ ಪ್ರಪಂಚವನ್ನು ಸೃಷ್ಟಿಸುವುದರಲ್ಲಿಯೂ, ನಾಶ ಮಾಡುವುದರಲ್ಲಿಯೂ ಮೂಲಕಾರಕನು ದೇವರೆ. ದೇವರು ಕಾರಕನೆಯಾಗಲಿ, ಕಾರ್ಯಕನಲ್ಲ, ಅಂದರೆ ಕೆಲಸಮಾಡುವವನು ಅಲ್ಲ. ಆತನು ಅಂದುಕೊಂಡರೆ ಯಾವ ಕೆಲಸವಾದರೂ ಹಾಗೆ ನಡೆದುಹೋ ಗುತ್ತದೆ. ಇದೇ ವಿಷಯವನ್ನೇ **2ನೇ ಸೂರಾ 117ನೇ ಆಯತ್‌ನಲ್ಲಿ "ಆತನು ಏನನ್ನು ಮಾಡುವುದಿಲ್ಲ. ಆತನು ಮಾಡಬೇಕೆಂದಿರುವುದನ್ನು ಆಗಿಹೋಗು ಎಂದರೆ ಆಗಿಹೋಗುತ್ತದೆ."** ಎಂದು ಬರೆಯಲ್ಪಟ್ಟಿದೆ. ಇದನ್ನನುಸರಿಸಿ ದೇವರು ಅಂದುಕೊಂಡರೆ ಅಥವಾ ಹೇಳಿದರೆ ಮಾಡುವವರಿದ್ದಾರೆಂದು ತಿಳಿಯುತ್ತಿದೆ. ದೇವರು ಪ್ರಪಂಚವನ್ನು ಪಾಲಿಸುವುದಕ್ಕೆ ತನ್ನ ಅಧೀನದಲ್ಲಿ ಎಷ್ಟೋ ಜನ ಪಾಲಕರನ್ನು ಇಟ್ಟುಕೊಂಡಿದ್ದಾನೆ. ದೇವರ ಆಜ್ಞೆಯನ್ನು ನೆರವೇರಿಸುವುದಕ್ಕೆ ಕಾಣಿಸದ ಪಾಲಕರು ದೇಶವೆಲ್ಲಾ ವ್ಯಾಪಿಸಿದ್ದಾರೆ. ತನ್ನ ಪಾಲಕರಿಂದ ದೇವರು ಮನುಷ್ಯರನ್ನು ಸೃಷ್ಟಿಸಿದ್ದಾನೆ ಮತ್ತು ಸಾಯಿಸುತ್ತಿದ್ದಾನೆ. ಪ್ರತಿ ಕೆಲಸಕ್ಕೆ ದೇವರು ಮೂಲಕಾರಕನೆಯಾಗಲಿ, ಆತನು ಕೆಲಸವನ್ನು ಮಾಡುವುದಿಲ್ಲ. ನಡೆಯಬೇಕಾದ ಕೆಲಸವನ್ನು ಮಾಡುವವರೂ, ಆತನ ಮಾತನ್ನು ಆಚರಿಸುವ ಪಾಲಕರೂ ಎಲ್ಲಿ ನೋಡಿದರೆ ಅಲ್ಲಿ ಇದ್ದಾರೆ. ದೇವರು ಕಾಣಿಸುವುದಿಲ್ಲ, ದೇವರ ಪಾಲಕರೂ ಕಾಣಿಸುವುದಿಲ್ಲ ಆದರೆ, ದೇವರ ಪಾಲನೆ ಮಾತ್ರ ಭೂಮಿಮೇಲೆ ನಡೆದುಹೋಗುತ್ತಿರುತ್ತದೆ. ಆದರೆ ದೇವರು ಏನು ಆಜ್ಞೆ ಕೊಡುತ್ತಿದ್ದಾನೆಂದು ಯಾರಿಗೂ ತಿಳಿಯದು. ಆದ್ದರಿಂದ ಆತನ ಆಜ್ಞೆ ಎಂತಹದೋ ತಿಳಿಯುವುದಕ್ಕೆ ಇಲ್ಲಿ **9ನೇ ಸೂರಾದಲ್ಲಿ 5ನೇ ಆಯತನ್ನು ಹೇಳಿದ್ದಾನೆ. ದೇವರ ಪಾಲನೆಯನ್ನು ಸಾಗಿಸುವವರು, ಯಾರನ್ನಾದರೂ ಶಿಕ್ಷಿಸುವವರು, ಯಾರಿಗಾದರೂ ಏನಾದರೂ ಮಾಡುವವರಾದ ತನ್ನ ಪಾಲಕರಿಗೆ ನಿಷಿದ್ಧ ದಿನಗಳಲ್ಲಿ ಅಲ್ಲದೆ ಉಳಿದ ದಿನಗಳಲ್ಲಿ**

**ಮುಷ್ರಿಕ್ಕರನ್ನು(ಕಪಟರನ್ನು) ಸಾಯಿಸೆಂದು ಹೇಳಿದ್ದಾನೆ. ಸ್ವಲ್ಪ ಜನರನ್ನು ಬಂಧಿಸಿರೆಂದು ಹೇಳಿದ್ದಾನೆ. ಸ್ವಲ್ಪ ಜನರನ್ನು ಸುತ್ತುವರೆಯಿರಿ ಎಂದು ಹೇಳಿದ್ದಾನೆ. ಸ್ವಲ್ಪ ಜನರನ್ನು ಮೊಟುಹಾಕಿ ಕಾದುಕೊಂಡಿರಿ ಎಂದು ಹೇಳಿದ್ದಾನೆ.** ಇಲ್ಲಿ ಗಮನಿಸಿದರೆ ಎಲ್ಲರನ್ನು ಸಾಯಿಸೆಂದು ಹೇಳಲಿಲ್ಲ. ಕೆಲವರನ್ನು ಹಿಡಿದುಕೊಳ್ಳಿಯೆಂದು, ಕೆಲವರನ್ನು ಸುತ್ತುವರೆಯಿರೆಂದು, ಕೆಲವರನ್ನು ಮೊಟು ಹತ್ತಿರ ಕಾಯಿರಿ ಎಂದು ಹೇಳಿದ್ದಾನೆ, ಹೇಳಿರುವುದು ದೇವರು, ಕೇಳಿ ಆಚರಿಸಬೇಕಾದವರು ಆತನ ಪಾಲಕರು ಅಥವಾ ದೂತರು. ಆತನು ಕೆಲವು ಕಾರ್ಯಗಳನ್ನು ತನ್ನ ದೂತರಿಗೆ ಅಥವಾ ತನ್ನ ಪಾಲಕರಿಗೆ ಹೇಳಿದರೆ, ಮಧ್ಯದಲ್ಲಿ ಕೇಳಿದ ಮನುಷ್ಯರು ಅದು ನನಗೇ ಹೇಳಿದ್ದಾನೆಂದು, ನಾನು ಇತರರನ್ನು ಸಾಯಿಸುತ್ತೇನೆಂದು, ಅದೇ ಜೀಹಾದ್ ಎಂದು, ದೇವರ ಕಾರ್ಯವನ್ನು ಮಾಡುವುದೇ ಪವಿತ್ರಯುದ್ಧವೆಂದು ಏಕೆ ಅಂದುಕೊಳ್ಳಬೇಕು. ನಿನಗೆ ಸಂಬಂಧವಿಲ್ಲದವುಗಳನ್ನು ನಿನಗೇ ಹೇಳಿದ್ದಾನೆಂದು ಅಂದುಕೊಳ್ಳುವುದು ತಪ್ಪಲ್ಲವೆ! ದೇವರು ಮುಷ್ರಿಕ್ಕರ ಬಗ್ಗೆ ಈ ವಿಧವಾಗಿ ಆಜ್ಞೆ ಕೊಡುತ್ತಾನೆಂದು **9ನೇ ಸೂರಾ, 5ನೇ ಆಯತ್‌ನಲ್ಲಿ** ಇದೆ. ಆ ಆಜ್ಞೆಯನ್ನು ನೆರವೇರಿಸುವವರು ಆತನ ಪಾಲಕರಿರುವಾಗ, ಆ ಕಾರ್ಯವನ್ನು ನಾನು ಮಾಡಬೇಕೆಂದು ಮನುಷ್ಯ ಏಕೆ ಅಂದುಕೊಳ್ಳಬೇಕು?

ಈ ವಾಕ್ಯದ ಮೊದಲಿನಲ್ಲಿಯೂ, ವಾಕ್ಯದ ಕೊನೆಯಲ್ಲಿಯೂ ಎರಡು ಗೇಟುಗಳಂತೆ ಎರಡು ವಾಕ್ಯಗಳು ಇವೆ. ಪ್ರಾರಂಭದಲ್ಲಿನ ಮೊದಲ ವಾಕ್ಯವನ್ನು, ಮುಕ್ತಾಯದಲ್ಲಿನ ಕೊನೆಯ ವಾಕ್ಯವನ್ನು ಗಮನಿಸಿದರೆ, ಸ್ವಲ್ಪ ತಿಳುವಳಿಕೆ ಇರುವ ಮನುಷ್ಯ ಸಹ ಆ ವಾಕ್ಯವು ಮನುಷ್ಯರಿಗೆ ಹೇಳಿರುವುದೆಂದು ಅಂದುಕೊಳ್ಳುವುದಿಲ್ಲ. ಈ ವಾಕ್ಯದಲ್ಲಿ ಮೊದಲು ನಿಷಿದ್ಧಮಾಸಗಳು ಕಳೆದ ನಂತರವೆಂದು ಹೇಳಲ್ಪಟ್ಟಿದೆ. ನಿಷಿದ್ಧ ಮಾಸಗಳು ಎಂದರೆ ಏನೋ ಯಾರಿಗಾದರೂ ತಿಳಿದಿದೆಯಾ? ಇಲ್ಲದಿದ್ದರೆ ದೇವರು ಎಲ್ಲಿಯಾದರೂ ಯಾರಿಗಾದರೂ ಇವು ನಿಷಿದ್ಧ ಮಾಸಗಳೆಂದು ಹೇಳಿದ್ದಾನಾ? ದೇವರು ಹೇಳಲಿಲ್ಲ. ಮನುಷ್ಯನಿಗೆ ತಿಳಿಯದು. ಅಂತಹ ಸಂದರ್ಭದಲ್ಲಿ ಯಾರಿಗೆ ಇಷ್ಟಬಂದವು ಅವರು ನಿಷಿದ್ಧಮಾಸಗಳಾಗಿ ಕೆಲವರು

ಮುಸ್ಲಿಮ್ ಪಂಡಿತರು ಹೇಳಿಕೊಳ್ಳುವುದು ನಡೆಯುತ್ತಿದೆ. ಆದರೂ ಅವರಮಾತು ನಿಜವೆಂದು ಅವರಿಗೆ ನಂಬಿಕೆಯಿಲ್ಲ. ಅಂತಹದರಲ್ಲಿ ನಿಷಿದ್ಧಮಾಸಗಳು ಎಂದು ದೇವರು ಏಕೆ ಆ ಹೆಸರನ್ನು ಅಲ್ಲಿ ಹೇಳಿದ್ದಾನೆಂದು ಯಾರಿಗಾದರೂ ಪ್ರಶ್ನೆ ಬರುತ್ತದೆ. ಅದಕ್ಕೆ ಉತ್ತರ ಈ ರೀತಿ ಇದೆ. ಮನುಷ್ಯ ಹುಟ್ಟಿದಾಗಲೇ ಆತನ ಕರ್ಮಪತ್ರದ ಪ್ರಕಾರ ಸ್ವಲ್ಪಕಾಲ ಸುಖಗಳು, ಸ್ವಲ್ಪಕಾಲ ಕಷ್ಟಗಳು, ಅನುಭವಿಸಬೇಕೆಂದು ದೇವರು ನಿರ್ಣಯಿಸಿ ಕಳಿಸಿರುತ್ತಾನೆ. ದೇವರ ನಿರ್ಣಯದ ಪ್ರಕಾರ ಮನುಷ್ಯ ಸುಖಗಳನ್ನು ಅನುಭವಿಸುವ ಕಾಲದಲ್ಲಿ ಕಷ್ಟಗಳು ಅನುಭವಿಸುವುದಕ್ಕೆ ಸಾಧ್ಯವಿಲ್ಲ, ಆದ್ದರಿಂದ ಮನುಷ್ಯ ಪುಣ್ಯಕಾಲ ಸುಖಗಳು ಅನುಭವಿಸುವ ಕಾಲವೆಂದು ಆ ಸಮಯ ಕಷ್ಟಗಳು ಅನುಭವಿಸುವುದಕ್ಕೆ ನಿಷಿದ್ಧಕಾಲವಾಗುತ್ತದೆಂದು, ಆ ಕಾಲದಲ್ಲಿ ಸುಖಗಳೇ ಅನುಭವಿಸಬೇಕಾಗಲಿ, ಕಷ್ಟಗಳನ್ನು ಅನುಭವಿಸುವುದಕ್ಕೆ ಸಾಧ್ಯವಿಲ್ಲವೆಂದು ತಿಳಿಯುತ್ತಿದೆ. ಆದ್ದರಿಂದ ಮನುಷ್ಯನ ಪುಣ್ಯಕಾಲವನ್ನು ದೇವರು ನಿಷಿದ್ಧ ಮಾಸಗಳೆಂದು, ನಿಷಿದ್ಧ ಕಾಲವೆಂದು ಹೇಳಿದ್ದಾನೆ.

ಕರ್ಮಪತ್ರದಲ್ಲಿ ಮನುಷ್ಯನಿಗೆ ಇರುವ ಪುಣ್ಯಕಾಲ ಆತನ ಕಷ್ಟಗಳಿಗೆ ನಿಷಿದ್ಧಕಾಲವಾಗುತ್ತದೆ. ಆದ್ದರಿಂದ ನಿಷಿದ್ಧ ಕಾಲ ಮನುಷ್ಯ ಮನುಷ್ಯನಿಗು ಬೇರೆಬೇರೆಯಾಗಿ ಇರುತ್ತದೆ. ಹಾಗಾದರೆ ಮನುಷ್ಯ ಕಷ್ಟಗಳ ನಿಷಿದ್ಧ ಕಾಲ, ಸುಖಗಳ ಷಿದ್ಧಕಾಲ ಯಾವಾಗಿರುತ್ತದೋ ಯಾವ ಮನುಷ್ಯನಿಗೂ ತಿಳಿಯದು. ಷಿದ್ಧ ನಿಷಿದ್ಧ ಎಲ್ಲವೂ ಕರ್ಮಪತ್ರದಲ್ಲಿನ ಕರ್ಮರಹಸ್ಯಗಳು. ಕರ್ಮಪತ್ರವೇನೊ, ಅದರಲ್ಲಿ ಯಾವ ಕರ್ಮಗಳಿವೆಯೋ ಯಾವ ಮನುಷ್ಯನಿಗೂ ತಿಳಿಯದು. ಅಂತಹದರಲ್ಲಿ ನಿಷಿದ್ಧಕಾಲ ಮನುಷ್ಯನಿಗೆ ಹೇಗೆ ತಿಳಿಯಬಲ್ಲದು? ತಿಳಿಯುವುದಕ್ಕೆ ಅವಕಾಶವೇ ಇಲ್ಲ. ಆದರೆ ಆ ಮಾತನ್ನು ಹೇಳಿರುವುದು ಮನುಷ್ಯನಿಗಲ್ಲವೆಂದು ಜ್ಞಾಪಕವಿಟ್ಟುಕೊಳ್ಳಬೇಕು. ದೇವರು ನಿಷಿದ್ಧಕಾಲವನ್ನು ಕುರಿತು ಹೇಳಿರುವುದು ತನ್ನ ಕೆಳಗಿರುವ ಪಾಲಕರಿಗೆ. ದೇವರ ಪಾಲಕರಿಗೆ ಮನುಷ್ಯರ ತಲೆಯಲ್ಲಿನ ಕರ್ಮ, ಅದರಲ್ಲಿನ ಪಾಪಪುಣ್ಯಗಳು ತಿಳಿದಿವೆ. ದೇವರು ಹೇಳಿದಂತೆ ಮನುಷ್ಯನ ಪುಣ್ಯಕಾಲವಾದ ನಿಷಿದ್ಧಕಾಲವನ್ನು ಬಿಟ್ಟು ಪಾಪಕಾಲ ಬಂದ ತಕ್ಷಣ ಅವರಿಗಿರುವ

ಕರ್ಮಪ್ರಕಾರ ಕೆಲವರು ಸಾಯಲ್ಪಡುತ್ತಾರೆ, ಕೆಲವರು ಬಂಧಿಸಲ್ಪಡುತ್ತಾರೆ, ಕೆಲವರು ಸೆರೆಹಿಡಿಸಲ್ಪಡುತ್ತಾರೆ. ದೇವರು ಹೇಳಿದಹಾಗೆ ಯಾರಿಗೆ ಏನು ನಡೆಯಬೇಕೊ ಅವುಗಳೆಲ್ಲವನ್ನು, ಕಣ್ಣಿಗೆ ಕಾಣಿಸದ ದೇವರ ಪಾಲಕರು ಮಾಡುತ್ತಾರೆ. ಮನುಷ್ಯ ಹುಟ್ಟಿದಾಗಿನಿಂದ ಯಾರೂ ದೇವರ ಪಾಲಕರ ಅಧೀನದಲ್ಲಿ ಇಲ್ಲದಹಾಗೆ ಬದುಕಲಿಲ್ಲ. ಅವನ ಜೀವನದಲ್ಲಿ ಏನು ಬೇಕಾಗಿದ್ದರೆ ಅವು, ಏನು ನಡೆಯಬೇಕಿದ್ದರೆ ಅವು ನಡೆಸುವವರು ದೇವರ ಪಾಲಕರೆ. ದೇವರು ಏನು ಮಾಡದಿರುತ್ತಾನೆ. ಮಾಡಬೇಕಾದ ಕೆಲಸಗಳನ್ನೆಲ್ಲ ದೇವರ ಪಾಲಕರೆ ಮಾಡುತ್ತಾರೆ.

ಎಂತಹ ಕರ್ಮವನ್ನು (ಪಾಪವನ್ನು) ಮಾಡಿಕೊಂಡವನಾಗಲಿ, ಅವನು ದೇವರ ಮಾರ್ಗವನ್ನು ಅನುಸರಿಸಿ, ದೇವರ ಜ್ಞಾನವನ್ನು ತಿಳಿದುಕೊಂಡರೆ, ಅಂತಹವನ ಪಾಪವನ್ನು ದೇವರು ಕ್ಷಮಿಸುತ್ತಾನೆ. ದೈವಜ್ಞಾನ ಲಭಿಸಿದವನ ಕರ್ಮಗಳು ಅಗ್ನಿಯಲ್ಲಿ ಕಟ್ಟಿಗೆಗಳು ಸುಟ್ಟುಹೋದಂತೆ ಜ್ಞಾನವೆಂಬ ಅಗ್ನಿಯಲ್ಲಿ ಸುಟ್ಟುಹೋಗುತ್ತವೆಂದು ಭಗವದ್ಗೀತೆಯಲ್ಲಿ ಭಗವಂತನು ಹೇಳಿದ್ದಾನೆ. ಆದ್ದರಿಂದ ದೇವರನ್ನು ಮೇಲಿನ ವಾಕ್ಯದಲ್ಲಿ ಕ್ಷಮಿಸುವವನೆಂದು ಹೇಳಿದ್ದಾರೆ. ದೇವರ ಜ್ಞಾನವನ್ನು ತಿಳಿದು ದೇವರ ಮಾರ್ಗದಲ್ಲಿ ಪ್ರಯಾಣಿಸುವವನ ಕರ್ಮಗಳು (ಪಾಪಗಳು) ಸುಟ್ಟುಹೋಗುವಂತೆ, ದೇವರು ಮಾಡುತ್ತಿರುವುದರಿಂದ ದೇವರನ್ನು ಕರುಣಾಮಯನು ಎಂದಿದ್ದಾರೆ. ಮನುಷ್ಯರು ದೇವರನ್ನು ಕರುಣಾಮಯನು, ದಯಾಮಯನು ಎಂದರೂ, ದೇವರಿಗೆ ವಾಸ್ತವವಾಗಿ ಕರುಣೆ ಇಲ್ಲ, ದಯೆಯಿಲ್ಲ. ಆತನು ಗುಣಗಳಿಗೆ ಅತೀತನು.

ಒಬ್ಬ ಮನುಷ್ಯ ತನ್ನ ಜೀವನವನ್ನು ಹೇಗೆ ಕಳೆಯುತ್ತಿರುವುದು, ಆತನು ಯಾರ ಅಧೀನದಲ್ಲಿ ಬದುಕುತ್ತಿರುವುದು, ಯಾರ ಆಧೀನದಲ್ಲಿದ್ದು ಮರಣಿಸುವುದು ಮನುಷ್ಯನಿಗೆ ತಿಳಿಯವಹಾಗೆ **ದೇವರು 9ನೇ ಸೂರಾ, 5ನೇ ಆಯತನ್ನು ಹೇಳಿದ್ದಾನೆ.** ಈ ಆಯತ್‌ನಲ್ಲಿ ಮನುಷ್ಯನ ಬಗ್ಗೆ ದೇವರು ತನ್ನ ಆಜ್ಞೆಯನ್ನು ಏನೆಂದು ತನ್ನ ಪಾಲಕರಿಗೆ ಕೊಡುತ್ತಿದ್ದಾನೊ ಅರ್ಥವಾಗುವಂತೆ ಮೇಲಿನ ವಾಕ್ಯವಿದೆ. ಆದರೆ ಈ ವಾಕ್ಯದಲ್ಲಿ ಇಷ್ಟು ಸಾರಾಂಶ ಇದೆಯೆಂದು ತಿಳಿಯದ ಮನುಷ್ಯರು,

ಮನುಷ್ಯರನ್ನು ಸಾಯಿಸೆಂದು ಹೇಳಿರುವುದು, ಬಂಧಿಸೆಂದು ಹೇಳಿರುವುದು, ತಮಗೆಯೆಂದು ಹಾಗೆ ಮಾಡುವುದೆ ಪವಿತ್ರಯುದ್ಧವೆಂದು ಅಂದುಕೊಳ್ಳುತ್ತಿದ್ದಾರೆ. ಹಾಗೆ ಅಂದುಕೊಳ್ಳುವುದು ಬಹಳ ತಪ್ಪಾಗುತ್ತದೆ. ಅದು ತನ್ನ ದೂತರಿಗೆ, ಪಾಲಕರಿಗೆ ಹೇಳಿದಮಾತಾಗಲಿ, ಮನುಷ್ಯರಿಗೆ ಹೇಳಿದ ವಾಕ್ಯವಲ್ಲ. ಅದನ್ನು **"ಜೀಹಾದ್"** ಎಂದು ಹೇಳುವುದು ಪೂರ್ತಿ ತಪ್ಪಾಗುತ್ತದೆ. ಈ ವಾಕ್ಯಕ್ಕೆ ಜೀಹಾದ್ ಎಂಬುವುದಕ್ಕೆ ಹೋಲಿಕೆ ಇಲ್ಲ. ಜೀಹಾದ್ ಎಂದರೆ ಮನುಷ್ಯರನ್ನು ಸಾಯಿಸುವುದು ಅಸಲಿಗೆ ಅಲ್ಲವೆಂದು ತಿಳಿಯಬೇಕು.

ಜೀಹಾದ್ ಎಂದರೆ ಪವಿತ್ರಯುದ್ಧ ಎಂದು ಅರ್ಥವಿದ್ದರೆ, ಅದು ಪವಿತ್ರವಾದ ಕಾರ್ಯವಾಗಿ ಇರಬೇಕಾಗಲಿ, ಮನುಷ್ಯರನ್ನು ಸಾಯಿಸುವ ಅಪವಿತ್ರಕಾರ್ಯವಾಗಿ ಇರಬಾರದು. ಒಬ್ಬ ಮನುಷ್ಯ ಇತರ ಮನುಷ್ಯರನ್ನು ಸಾಯಿಸುವುದು ಪಾಪದಕೆಲಸವಾಗುತ್ತದೆ. ಆದ್ದರಿಂದ ಅದು ಅಪವಿತ್ರಕಾರ್ಯ ವಾಗುತ್ತದೆ. ಪವಿತ್ರ ಕಾರ್ಯ ಅಲ್ಲ. ಪವಿತ್ರ ಯುದ್ಧವೆಂದರೆ ಒಂದು ವಿಧವಾಗಿ ಅದು ಯುದ್ಧವೇ ಅಲ್ಲವೆಂದು ಹೇಳಬಹುದು. ದೇವರ ಮಾರ್ಗದಲ್ಲಿನ ಹೋರಾಟವನ್ನು ಪವಿತ್ರಯುದ್ಧ ಎಂದು ಹೇಳಬಹುದಾಗಲಿ, ಸಾಟಿ ಮನುಷ್ಯರನ್ನು ಸಾಯಿಸುವುದು ಪವಿತ್ರತೆ ಅನಿಸಿಕೊಳ್ಳುವುದಿಲ್ಲ. ಅಂತಹ ಕಾರ್ಯಗಳು ಪವಿತ್ರಯುದ್ಧ ಅಲ್ಲವೇ ಅಲ್ಲ. ಎಲ್ಲಾ ವಿಧಗಳಲ್ಲಿ ಆಲೋಚಿಸಿದರೂ ಕೊನೆಗೆ ದೇವರ ಮಾರ್ಗದಲ್ಲಿ ಶ್ರಮಪಡುವುದನ್ನು ಪವಿತ್ರಯುದ್ಧವಾಗಿ ಹೇಳಬಹುದು. ದೇವರ ಮಾರ್ಗವೆಂದರೆ ಏನು? ಅದು ಎಲ್ಲಿದೆ? ಹೇಗಿರುತ್ತದೆ? ಎಂದು ಕೆಲವರು ಪ್ರಶ್ನಿಸಬಹುದು. ಅದಕ್ಕೆ ಸರಿಯಾದ ಸಮಾಧಾನ ಹೇಳಿದರೆ ದೇವರ ಮಾರ್ಗ ಸೂಕ್ಷ್ಮವಾದುದು, ಸ್ಥೂಲವಾದುದು ಅಲ್ಲ. ಆದ್ದರಿಂದ ಅದು ಕಣ್ಣಿಗೆ ಕಾಣಿಸುವುದು ಅಲ್ಲ. ಅಂತಹ ಮಾರ್ಗವನ್ನು ಹೀಗಿರುತ್ತದೆಂದಾಗಲಿ ಹೇಳುವುದಕ್ಕೆ ಸಾಧ್ಯವಿಲ್ಲ. ದೇವರನ್ನು ತಿಳಿಯುವುದಕ್ಕೆ ಮಾಡುವ ಕಾರ್ಯಗಳನ್ನೇ ದೇವರಮಾರ್ಗ ಎನ್ನಬಹುದು. ಅಂತಹ ಕಾರ್ಯಗಳಲ್ಲಿ ಪಡುವಶ್ರಮವನ್ನು ದೇವರ ಮಾರ್ಗದಲ್ಲಿ ಹೋರಾಟ ಎಂದು ಹೇಳಬಹುದು.

ಒಂದೊಂದು ಮತದಲ್ಲಿ ಒಂದೊಂದು ವಿಧವಾಗಿ ದೇವರನ್ನು ತಿಳಿಯುವ ವಿಧಗಳು ಇವೆ. ಹಿಂದೂಮತದಲ್ಲಿ ಕರ್ಮಯೋಗ, ಬ್ರಹ್ಮಯೋಗ, ಭಕ್ತಿಯೋಗ ಎಂಬ ಮೂರು ಯೋಗಗಳು ಇವೆ. ಈ ಮೂರು ಯೋಗಗಳಲ್ಲಿ ಒಂದು ಯೋಗವನ್ನು ಆಚರಿಸಿದರೂ ಅದು ದೇವರಮಾರ್ಗದಲ್ಲಿ ಪ್ರಯಾಣಿಸಿದಂತಾಗುತ್ತದೆ. ಯೋಗಗಳನ್ನು ಆಚರಿಸುವುದರಲ್ಲಿ ಪಡುವ ಶ್ರಮವನ್ನು ದೇವರ ಮಾರ್ಗದಲ್ಲಿ ಹೋರಾಟ ಎಂದು ಹೇಳಬಹುದು. ಕ್ರೈಸ್ತಮತದಲ್ಲಿನ ಭಕ್ತಿ ಪ್ರಕಾರ ಚರ್ಚಿಗೆ ಹೋಗಿ ಪ್ರಾರ್ಥನೆ ಮಾಡುವುದೂ, ಬೈಬಲ್ ಗ್ರಂಥವನ್ನು ಓದುವುದೂ ದೇವರ ಮಾರ್ಗದಲ್ಲಿ ಪ್ರಯಾಣಿಸಿದಂತಾಗುತ್ತದೆ. ಇನ್ನು ಮುಸ್ಲಿಮ್ ಮತದಲ್ಲಿ ದೇವರನ್ನು ತಿಳಿಯುವುದಕ್ಕೆ ನಾಲ್ಕು ವಿಧಗಳ ಶ್ರಮವನ್ನು ಪಡಬೇಕು. ಆ ನಾಲ್ಕು ವಿಧಗಳನ್ನು ಆಚರಿಸಿದಾಗ ಅವನು ದೇವರ ಮಾರ್ಗದಲ್ಲಿ ಪ್ರಯಾಣಿಸಿದಂತಾಗುತ್ತದೆ. ನಾಲ್ಕು ವಿಧಗಳ ದೇವರ ಆರಾಧನೆಗಳಲ್ಲಿ ಪಡುವಶ್ರಮವನ್ನು ದೇವರಿಗೋಸ್ಕರ ಮಾಡುವ ಹೋರಾಟ ಎಂದು ಹೇಳಬಹುದು. ಅದನ್ನೆ ಪವಿತ್ರಯುದ್ಧ ಎಂದು ಸಹ ಹೇಳಬಹುದು. ಒಟ್ಟಾರೆ ದೇವರ ಮೇಲೆ ವಿಶ್ವಾಸವನ್ನು ಒಂದೊಂದು ಮತದಲ್ಲಿ ಒಂದೊಂದು ವಿಧವಾಗಿ ಮನುಷ್ಯರು ಪ್ರದರ್ಶಿಸುತ್ತಿದ್ದಾರೆ. ಹಿಂದೂ ಮತದಲ್ಲಿ ದೇವರ ಮಾರ್ಗ ಯೋಗಗಳ ರೂಪದಲ್ಲಿರುವಾಗ, ಕ್ರೈಸ್ತಮತದಲ್ಲಿ ಪ್ರಾರ್ಥನೆ ರೂಪದಲ್ಲಿದೆ. ಮುಸ್ಲಿಮ್‌ರ ವಿಷಯಕ್ಕೆ ಬಂದರೆ ದೇವರ ಮಾರ್ಗ ನಾಲ್ಕು ಮಾರ್ಗಗಳಾಗಿದೆ. ಅವು ಕ್ರಮವಾಗಿ 1) ನಮಾಜ್, 2) ಜಕಾತ್, 3) ರೋಜಾ, 4) ಹಜ್ ಎಂದು ಇದೆ. ನಮಾಜ್ ಎಂದರೆ ಪ್ರಾರ್ಥನೆ, ಜಕಾತ್ ಎಂದರೆ ದೇವರಿಗೆ ಕಾಣಿಕೆಗಳು ಕೊಡುವುದು, ರೋಜಾ ಎಂದರೆ ಉಪವಾಸ ಇರುವುದು, ಹಜ್ ಎಂದರೆ ಮಕ್ಕಾ ಯಾತ್ರೆ ಮಾಡುವುದು ಎಂದು ವಿವರ ಇದೆ. ಮುಸ್ಲಿಮ್ ಆದವನು ಈ ನಾಲ್ಕು ವಿಧಾನಗಳಲ್ಲಿ ಏನನ್ನು ಆಚರಿಸಿದರೂ ದೇವರ ಮಾರ್ಗದಲ್ಲಿ ಇದ್ದಂತೆ, ಆದರೆ ದೇವರು ನಮಾಜ್, ಜಕಾತ್ ಎನ್ನುವ ಎರಡು ಆಚರಣೆಗಳೇ ಖುರಾನಲ್ಲಿ 9ನೇ ಸೂರಾ 5ನೇ ಆಯತ್‌ನಲ್ಲಿ ಪ್ರಸ್ತಾಪಿಸಿದ್ದಾನೆ.

ಈಗ ಪುನಃ **9ನೇ ಸೂರಾ, 5ನೇ ಆಯತ್‌ನೊಳಗೆ** ಬರೋಣ. ಆ ವಾಕ್ಯದಲ್ಲಿ ನಾವು ಹೇಳಿಕೊಳ್ಳಬೇಕಾಗಿರುವುದು ಇನ್ನೂ ಸ್ವಲ್ಪವಿದೆ. ದೇವರು ಮುಷ್ರಿಕ್ಕರನ್ನು (ಕಪಟರನ್ನು, ಮಾತು ತಪ್ಪಿದವರನ್ನು) ನಾಲ್ಕುವಿಧಗಳಲ್ಲಿ ಶಿಕ್ಷಿಸೆಂದು, ಸಾಯಿಸೆಂದು ಹೇಳಿದ ನಂತರ ಒಂದುವೇಳೆ ಅವನು ಪಶ್ಚಾತ್ತಾಪಪಟ್ಟು ನಮಾಜ್‌ನ್ನು ಸ್ಥಾಪಿಸಿ, ಜಕಾತನ್ನು ಕೊಟ್ಟರೆ ಅವರನ್ನು ಅವರ ಮಾರ್ಗದಲ್ಲಿ ಬಿಟ್ಟುಬಿಡಿ ಎಂದು ಇದೆ ಅಲ್ಲವೆ! ನಮಾಜ್, ಜಕಾತ್ ಮುಸ್ಲಿಮ್ ಮತದಲ್ಲಿನ ಆರಾಧನಾ ಮಾರ್ಗಗಳೆಂದು ಅವುಗಳನ್ನೇ ದೇವರ ಮಾರ್ಗವೆಂದು ಹೇಳಿ ಕೊಂಡಿದ್ದೇವೆ. ಒಬ್ಬವ್ಯಕ್ತಿ ಮುಸ್ಲಿಮಾಗಿ ಹುಟ್ಟಿ ನಮಾಜ್ ಮಾಡದಂತೆ, ಜಕಾತ್ ಕೊಡದಂತಿದ್ದರೆ ಅಂತಹವನನ್ನು ಮಾತು ತಪ್ಪಿದವನೆಂದು, ತನ್ನ ಮತದಲ್ಲಿರುವ ಮಾತನ್ನು ತಪ್ಪಿದವನೆಂದು, ಕಪಟ ಹೃದಯ ಇರುವವನೆಂದು ಹೇಳಬಹುದು. ಆಗ ಅಂತಹವನನ್ನು ಶಿಕ್ಷಿಸೆಂದು ದೇವರು ತನ್ನ ದೂತರಿಗೆ ಹೇಳುವುದು ನಡೆದಿದೆ. ಆ ವಿಧವಾಗಿ ದೇವರ ಪಾಲಕರು ಶಿಕ್ಷಿಸಿದಾಗ ಯಾರಾದರೂ ತನ್ನ ತಪ್ಪನ್ನು ತಾನು ತಿಳಿದುಕೊಂಡು, ಪಶ್ಚಾತ್ತಾಪಪಟ್ಟು ದೇವರ ಮಾರ್ಗವನ್ನು ಅನುಸರಿಸಬೇಕೆಂದು ತಿಳಿದು ದೇವರ ಪ್ರಾರ್ಥನೆಯಾದ ನಮಾಜ್ ಮಾಡುತ್ತಾ, ಜಕಾತನ್ನು ಕೊಟ್ಟರೆ ಅವನು ದೇವರ ಮಾರ್ಗದೊಳಗೆ ಬಂದಂತಾಗುತ್ತದೆ. ಆಗ ಅವನನ್ನು ಶಿಕ್ಷಿಸಬೇಕಾದ ಕೆಲಸವಿಲ್ಲ. ಅವನ ತಪ್ಪುಗಳೆಲ್ಲ ದೇವರು ಕ್ಷಮಿಸುವುದರಿಂದ ದೇವರ ಪಾಲಕರು ಆತನನ್ನು ಶಿಕ್ಷಿಸದಂತೆ ಅವನನ್ನು ಅವನ ಮಾರ್ಗದಲ್ಲಿ ಬಿಟ್ಟುಬಿಡು ಎಂದು ಹೇಳಿದಂತೆ ಆ ವಾಕ್ಯದಲ್ಲಿ ಇದೆ. ಅವನನ್ನು ಅವನಮಾರ್ಗದಲ್ಲಿ ಎಂದು ಅಂದರೆ ಅವನು ಅನುಸರಿಸುತ್ತಿರುವ ದೇವರಮಾರ್ಗ ಎಂದು ಅರ್ಥ. ಹಾಗೆ ಬಿಟ್ಟುಬಿಡುವುದರಿಂದ ಅವನನ್ನು ಶಿಕ್ಷೆಯಿಂದ ಕ್ಷಮಿಸಿದಂತಾಗುತ್ತದೆ. ಆದ್ದರಿಂದ ದೇವರು ಕ್ಷಮಿಸುವವನು ಎಂದು ವಾಕ್ಯದ ಕೊನೆಯಲ್ಲಿ ಹೇಳುವುದಾಗಿದೆ.

ಇಷ್ಟು ವಿವರವಾಗಿ ಹೇಳಿದರೂ ಕೆಲವರು ನಿಷಿದ್ಧ ಕಾಲ ಇಲ್ಲವೇ ನಿಷಿದ್ಧ ಮಾಸಗಳು ಎಂಬ ಮಾತಿನ ಹತ್ತಿರ ಸ್ವಲ್ಪ ಅನುಮಾನ ಬಂದು ನಮ್ಮ

ಮಾತನ್ನು ನಂಬದಂತಿದ್ದಾರೆ. ಅಂತಹವರಿಗೆ ಮುಸ್ಲಿಮ್ ಹಿರಿಯರು ಹೇಳಿದ ವಿವರವನ್ನು ನೋಡಿರೆಂದು ಇಲ್ಲಿ ಆ ವಿವರವನ್ನು ನೊಂದಾಯಿಸುತ್ತಿದ್ದೇವೆ ನೋಡಿರಿ. ("ಅಂತಿಮ ದೈವಗ್ರಂಥ ಖುರ್‌ಆನ್" ಎಂಬ ಗ್ರಂಥದಲ್ಲಿ ಮಹಾಜ್ಞಾನಿ 'ಹಾಫಿಜ್ ಸಲಾಹುದ್ದೀನ್ ಯೂಸುಫ್" ನವರು ಬರೆದ ವ್ಯಾಖ್ಯಾನವನ್ನು ಇಲ್ಲಿಟ್ಟಿದ್ದೇವೆ.) **("ನಿಷಿದ್ಧಮಾಸಗಳೆಂದರೆ ಯಾವುವು?) ಈ ವಿಷಯದ ಮೇಲೆ ಭಿನ್ನಾಭಿಪ್ರಾಯಗಳಿವೆ. 1) ರಜತ್ 2) ಜೀಖ ಅದ 3) ಜಲ್ಹಜ್ 4) ಮುಹದ್ರಮ್ ಎಂಬ ನಾಲ್ಕು ಮಾಸಗಳೆ ನಿಷಿದ್ಧಮಾಸಗಳೆಂದು ಒಂದು ಅಭಿಪ್ರಾಯವಿದೆ. ಆದರೆ ಜಲ್‌ಹಜ್ ತಿಂಗಳ 10ನೇ ತಾರೀಖು ಈ ಪ್ರಕಟಣೆ ಹೊರಬಂದಿದೆ. ಈ ವಿಧವಾಗಿ ಈ ಪ್ರಕಟಣೆ ಹೊರಬಿದ್ದ ದಿನದಿಂದ ಕೇವಲ 50 ದಿನಗಳ ಗಡುವು ಕೊಡಲಾಗಿದೆ. ಈ ಗಡುವು ಮುಗಿಯುತ್ತಲೇ ಮುಷ್ರಿಕ್ಕರನ್ನು ಹಿಡಿದುಕೊಂಡು ಅವರನ್ನು ಹತಮಾಡುವುದಕ್ಕೆ ಅನುಮತಿ ಕೊಡಲಾಗಿದೆ. ಅದರೆ ಇಮಾಮ್ ಇಟ್ನ ಕಸಿರ್ ಈ ಅಭಿಪ್ರಾಯದಿಂದ ಏಕೀಭವಿಸಲಿಲ್ಲ. ಈ ಆಯತ್‌ನಲ್ಲಿ ಪ್ರಸ್ತಾಪಿಸಲ್ಪಟ್ಟ ನಿಷಿದ್ಧ ಮಾಸಗಳು ಆ ನಿಷಿದ್ಧ ಮಾಸಗಳು ಅಲ್ಲವೆಂದು, ವಾಸ್ತವಕ್ಕೆ ಇದು ಜಲ್‌ಹಜ್ 10ನೇ ತಾರೀಖಿನಿಂದ ರಜಿವುನ್ಸಾನಿ 10ನೇ ತಾರೀಖಿನವರೆಗು ಇರುವ ಗಡುವು ಎಂದು ಆತನು ಅಭಿಪ್ರಾಯ ಪಟ್ಟಿದ್ದಾನೆ. ಮತ್ತು ಇವುಗಳನ್ನು ನಿಷಿದ್ಧ ಮಾಸಗಳು (ಅಷೆಹುರೆ ಹುಮುಮ್) ಎಂದು ಏಕೆ ಅನ್ನುವುದು ನಡೆದಿದೆ! ಎಂದು ಅಂದರೆ ಬೇರೆಯಾಗುವುದರ ಪ್ರಕಟನೆ ನಡೆದ ನಂತರ ಆ ನಾಲ್ಕು ತಿಂಗಳಲ್ಲಿ ಮುಷ್ರಿಕ್ಕರು ಯುದ್ಧ ಮಾಡುವುದಕ್ಕಾಗಲಿ, ಅವರಿಗೆ ವಿರುದ್ಧವಾಗಿ ಎಂತಹ ಚರ್ಯವನ್ನು ಕೈಗೊಳ್ಳುವುದಕ್ಕಾಗಲಿ, ಅನುಮತಿ ಇಲ್ಲದಾಗಿದೆ, ಬಿಡುಗಡೆ ಪ್ರಕಟಣೆ ನಡೆದದ್ದನ್ನನುಸರಿಸಿ ಈ ಎರಡನೇ ಅಭಿಪ್ರಾಯವೇ ಸಹೇತುಕ ಎನಿಸುತ್ತದೆ. ನಿಜ ಅಲ್ಲಾಹ್‌ಗೆ ಗೊತ್ತು")**

ವಾಸ್ತವವಾಗಿ ದೈವಜ್ಞಾನವನ್ನು ಅನುಸರಿಸಿ ಇಂತಹ ದಿನಗಳೆ ನಿಷಿದ್ಧಮಾಸಗಳೆಂದು ಹೇಳುವುದಕ್ಕೆ ಸಾಧ್ಯವಿಲ್ಲ. ಯಾರ ಕರ್ಮವನ್ನನುಸರಿಸಿ ಅವರಿಗೆ ನಿಷಿದ್ಧ ಕಾಲವಿರುತ್ತದೆಂದು ಹೇಳಬಹುದು. ಮೇಲೆ ಹೇಳಿದ **5ನೇ**

**ಆಯತ್** ವಾಕ್ಯವನ್ನು ಚೆನ್ನಾಗಿ ಅರ್ಥವಾಗುವುದಕ್ಕೆ ನಂತರ ಭವಿಷ್ಯತ್ತಿನಲ್ಲಿ ಅನುಮಾನಗಳು ಬಾರದಂತಿರುವುದಕ್ಕೆ **9ನೇ ಸೂರಾದಲ್ಲಿನ "6ನೇ" ಆಯತ್‌ನ್ನು** ಸಹ ವಿವರಿಸಿ ಹೇಳಿಕೊಂಡರೆ ಜೀಹಾದ್ ಮೇಲಿರುವ ಭ್ರಮೆ ಎಲ್ಲವೂ ತೊಲಗಿಹೋಗುತ್ತದೆ. ಆರನೆ ಆಯತ್ ಈ ವಿಧವಾಗಿ ಇದೆ. **"ಒಂದುವೇಳೆ ಮುಷ್ರಿಕ್ಕರಲ್ಲಿ ಯಾವ ವ್ಯಕ್ತಿ ಆದರು ನಿನ್ನನ್ನು ಶರಣು ಕೋರಿದರೆ, ಆತನು ದೈವಜ್ಞಾನವನ್ನು ಕೇಳುವವರೆಗು ಆತನಿಗೆ ನೀನು ಆಶ್ರಯಕೊಡು, ಆ ನಂತರ ಆತನನ್ನು ಆತನ ಸುರಕ್ಷಿತ ಸ್ಥಾನಕ್ಕೆ ಸೇರಿಸು, ಅವರು ಜ್ಞಾನ ತಿಳಿಯ ದವರಾಗಿರುವುದರಿಂದ, ಅವರ ಬಗ್ಗೆ ನೀನು ಈ ವಿಧವಾಗಿ ವ್ಯವಹರಿಸು,** ಈಗ ಈ ವಾಕ್ಯದಲ್ಲಿ ಸಹ ನಮ್ಮ ತಿಳುವಳಿಕೆ ಉಪಯೋಗಿಸಿ ಭಾವವನ್ನು ಅರ್ಥ ಮಾಡಿಕೊಳ್ಳಬೇಕು. ಹಾಗಲ್ಲದೆ ಮೇಲ್ನೋಟಕ್ಕೆ ನೋಡಿದರೆ ಮತ್ತೊಂದು ವಿಧವಾಗಿ ಅರ್ಥವಾಗುತ್ತದೆ. ಆದ್ದರಿಂದ ವಾಸ್ತವ ತಿಳಿಯುವಂತೆ ಈ ವಾಕ್ಯವನ್ನು ಕುರಿತು ಯೋಚಿಸಬೇಕು. ದೇವರಮಾರ್ಗದಲ್ಲಿ ನಾಲ್ಕು ಕೆಲಸಗಳನ್ನು ಹೇಳಿದರೂ ಅದರಲ್ಲಿ ಹಿಂದಿರುವ ರೊಜಾ, ಹಜ್‌ಗಳಿಗಿಂತ ಮುಖ್ಯವಾದವು ನಮಾಜ್, ಜಕಾತ್‌ಯೆಂದು ತಿಳಿಯಬೇಕು. ಮನುಷ್ಯ ಅಜ್ಞಾನದಲ್ಲಿದ್ದು ದೇವದೂತರಿಂದ ಶಿಕ್ಷಿಸಲ್ಪಡುವಾಗ, ಅವರ ಹೃದಯದಲ್ಲಿ ಬದಲಾವಣೆಬಂದು ಜ್ಞಾನಮಾರ್ಗದಲ್ಲಿ ಹೋಗಬೇಕೆಂದುಕೊಂಡವನು ಅಂತರಂಗದಲ್ಲಿ ನಾನು ಈ ಬಾಧೆಗಳನ್ನು ಅನುಭವಿಸಲಾರೆನು. ನಾನು ಈಗಿನಿಂದ ದೈವಮಾರ್ಗದಲ್ಲಿ ಪ್ರಯಾಣಿಸುತ್ತೇನೆಂದು ಅಂದುಕೊಳ್ಳುವವನು ದೇವರನ್ನು ಶರಣು ಕೋರಿದಂತೆ, ಆಗ ದೇವರ ದೂತನನ್ನು ಸಹ ಶರಣುಕೋರಿದಂತೆಯಾಗುತ್ತದೆ. ದೇವರು ಏನು ಮಾಡದವನು ಆದ್ದರಿಂದ ಆಗ ಅವನ ಶರಣ್ಯವನ್ನು ಅವನನ್ನು ಶಿಕ್ಷಿಸುವ ದೂತ ಇಲ್ಲವೆ ಪಾಲಕನಾದವನೇ ಸ್ವೀಕರಿಸಬೇಕು. ಅಂತಹವನಿಗೆ ದೈವಜ್ಞಾನವನ್ನು ತಿಳಿಯುವಂತೆ ದೇವದೂತನೇ ಅವಕಾಶ ಕೊಡುತ್ತಾನೆ. ಆತನಿಗೆ ದೈವಜ್ಞಾನ ತಿಳಿಯುವವರೆಗು ದೇವದೂತ ಯಾವ ಶಿಕ್ಷೆ ವಿಧಿಸದಂತಿರುತ್ತಾನೆ. ಆಗ ಮನುಷ್ಯ ದೇವದೂತವೊಂದರ ಆಶ್ರಯದಲ್ಲಿ ಇದ್ದಂತೆ ಲೆಕ್ಕ. ಆತನು ಸಂಪೂರ್ಣ ಜ್ಞಾನ ತಿಳಿದ ನಂತರ ಅವನಿಗೆ ಯಾವ

ಬಾಧೆ ವಿಧಿಸದಂತೆ ದೇವದೂತ ಅವನನ್ನು ಬಿಟ್ಟು ಬಿಡುವನು. ಆಗ ಅವನನ್ನು ಸುರಕ್ಷಿತ ಸ್ಥಾನದಲ್ಲಿ ಬಿಟ್ಟಂತೆ ಆಗುತ್ತಿದೆ. ಜ್ಞಾನ ತಿಳಿಯದ ಮನುಷ್ಯರ ಬಗ್ಗೆ ದೇವರು ತನ್ನದೂತನನ್ನು ಕಠಿಣವಾಗಿ ಪ್ರವರ್ತಿಸುವಂತೆ ಮಾಡದೆ ಮಾಡುವು ದಲ್ಲದೆ, ಆ ಮನುಷ್ಯನಿಗೆ ಜ್ಞಾನವನ್ನು ತಿಳಿಯುವವರೆಗು ಕಾದುಕೊಂಡಿದ್ದು ಜ್ಞಾನವನ್ನು ತಿಳಿದುಕೊಂಡರೆ, ಅವನನ್ನು ಸುರಕ್ಷಿತವಾಗಿ ಬಿಟ್ಟು ಬಿಡುವಂತೆ ಮಾಡುತ್ತಿದ್ದಾನೆ. ಒಂದುವೇಳೆ ಅವನು ಜ್ಞಾನವನ್ನು ತಿಳಿಯದಹಾಗೆ ಪುನಃ ಅಜ್ಞಾನದ ಕಡೆಹೋದರೆ, ಅವನಿಗೆ ದೂತನಿಂದ ರಕ್ಷಣೆ ಇರುವುದಿಲ್ಲ. ದೂತ ತಪ್ಪದೆ ಅವನನ್ನು ಪೀಡಿಸಿ ಸುರಕ್ಷಿತವಾಗಿ ಇಲ್ಲದಹಾಗೆ ಮಾಡುತ್ತಾನೆ.

9ನೇ ಸೂರಾ 5, 6 ವ್ಯಾಕಗಳನ್ನನುಸರಿಸಿ ಒಬ್ಬ ಮನುಷ್ಯನನ್ನು ಹಿಂಸಿಸುವವನಾಗಲಿ, ರಕ್ಷಿಸುವವನಾಗಲಿ, ಅವನಹತ್ತಿರವಿರುವ ಪಾಲಕನೆಯೆಂದು ತಿಳಿಯುತ್ತಿದೆ. ಮನುಷ್ಯ ದೇವರ ಜ್ಞಾನ ತಿಳಿಯಲ್ಪಟ್ಟರೆ, ದೂತನಿಂದ ರಕ್ಷಣೆ ಇರುತ್ತದೆ. ಜ್ಞಾನವನ್ನು ತಿಳಿಯದೆ ಹೋದರೆ, ದೂತನಿಂದ ಶಿಕ್ಷೆ ಇರುತ್ತದೆ. ಇದು ಮುಸ್ಲಿಮ್‌ರಿಗೆ ಮಾತ್ರವೆ ಹೇಳಿದ ಜ್ಞಾನ ಎಂದು ಅಂದುಕೊಳ್ಳಬಾರದು. ಇದರಲ್ಲಿ ಹೇಳಿದ ಜ್ಞಾನ ಎಲ್ಲಾ ಮತಸ್ಥರಿಗೂ ಅನ್ವಯಿಸುತ್ತದೆ. ಆದ್ದರಿಂದ ಮತರಕ್ಷಣೆಗೆಂದು ಒಬ್ಬ ಮನುಷ್ಯ ಮತ್ತೊಬ್ಬ ಮನುಷ್ಯನನ್ನು ಹಿಂಸಿಸುವುದಾಗಲಿ, ಸಾಯಿಸುವುದಾಗಲಿ ಮಾಡಿದರೆ ಅದು ತಪ್ಪದೆ ಪಾಪವಾಗುತ್ತದಾಗಲಿ, ದೇವರಮಾರ್ಗದಲ್ಲಿ ಒಳ್ಳೆಯಕೆಲಸವಲ್ಲ. ದೇವರಿಗೋಸ್ಕರ ಮಾಡುವ ಪವಿತ್ರಯುದ್ಧ ಅಲ್ಲ. ಈ ಮಧ್ಯಕಾಲದಲ್ಲಿ ಮತದ್ವೇಷಗಳಿಂದ ಒಬ್ಬರನ್ನೊಬ್ಬರು ಸಾಯಿಸಿಕೊಳ್ಳುತ್ತಾ ಅದನ್ನು ಪವಿತ್ರಯುದ್ಧವೆಂದು ಅಂದುಕೊಳ್ಳುತ್ತಿದ್ದಾರೆ. ಮತಗಳಿಗೋಸ್ಕರ, ಮತರಕ್ಷಣೆಗೋಸ್ಕರ ಒಬ್ಬರನ್ನೊಬ್ಬರು ಸಾಯಿಸಿಕೊಳ್ಳುವುದು ಎಲ್ಲಾ ಮತಗಳಲ್ಲಿ ನಡೆಯುತ್ತಿದೆ. ಆದರೆ ಮುಸ್ಲಿಮ್‌ರು ಪ್ರತ್ಯೇಕಿಸಿ ಪವಿತ್ರ ಯುದ್ಧವೆಂದು, ದೇವರಿಗೋಸ್ಕರ ಮಾಡುವ ಕಾರ್ಯವೆಂದು ಅದನ್ನೇ ಜೀಹಾದ್ ಎಂದು ಹೇಳುತ್ತಿದ್ದಾರೆ. ಹಾಗೆ ಮುಸ್ಲಿಮ್‌ರು ಹೇಳುವುದಕ್ಕೆ ಮಾಡುವುದಕ್ಕೆ ಕಾರಣ ಅವರ ಹಿಂದಿರುವ ಮುಸ್ಲಿಮ್ ಹಿರಿಯರೆಂದೇ ಹೇಳಬಹುದು. ಅವರು ಮಾಡುವ

ಪವಿತ್ರ ಯುದ್ಧದ ಹಿಂದೆ ಸ್ವಮತರಕ್ಷಣ, ಪರಮತ ನಾಶ ಹೊರತು ಏನೂ ಇಲ್ಲ. ಮುಸ್ಲಿಮ್‌ರು ಜೀಹಾದ್ ಎಂದು ಹೆಸರಿಟ್ಟು ಮಾಡುತ್ತಿದ್ದರೂ, ಹಿಂದೂಗಳು ಹೆಸರು ಇಡದಹಾಗೆ ಮಾಡುತ್ತಿದ್ದರೂ ಇಬ್ಬರ ಕೆಲಸ ಒಂದೆಯಾಗುತ್ತಿದೆ. ಒಬ್ಬ ಮುಸ್ಲಿಮ್ ಮತವೆಂದಾಗಲಿ, ಹಿಂದೂಮತವೆಂದಾಗಲಿ ಹೇಳಬೇಕಾದ ಕೆಲಸವಿಲ್ಲ ಆದರೆ, ಈದಿನ ಎಲ್ಲಾಮತಗಳಲ್ಲಿಯೂ ಸ್ವಮತ ರಕ್ಷಣೆ, ಪರಮತ ನಾಶ ಎಂಬ ಉದ್ದೇಶವೇ ಇದೆ. ಸ್ವಮತ ರಕ್ಷಣೆ ಇರುವಾಗ ತಪ್ಪದೆ ಪರಮತದ್ವೇಷ ಇರುತ್ತದೆ. ಪರಮತ ದ್ವೇಷ ಕೊನೆಗೆ ಹಿಂಸೆಯಾಗಿ ಬದಲಾಗುವುದು ನಡೆಯುತ್ತಿರುವ ಕೆಲಸವೇ.

ಸ್ವಮತ ರಕ್ಷಣೆ, ಪರಮತ ಭಕ್ಷಣೆ ಎಂಬ ವಿಧಾನವನ್ನು ದೇವರು ಒಪ್ಪಿಕೊಳ್ಳುವುದಿಲ್ಲ. ದೇವರು ಭೂಮಿಮೇಲೆ ಪ್ರತಿಯೊಂದನ್ನು ಸೃಷ್ಠಿಸಿದ್ದಾನೆ. ಹಾಗೆಯೇ ಮನುಷ್ಯರನ್ನು ತರಗತಿಗಳಾಗಿ ವಿಭಜಿಸಿ ಸ್ವರ್ಗ, ನರಕಗಳಿಗೆ ಕಳಿಸುವುದಕ್ಕೆ ದೇವರು ಮನುಷ್ಯರ ಹಿಂದಿದ್ದು ಮುಖ್ಯವಾಗಿ ಮೂರು ಮತಗಳನ್ನು ಸೃಷ್ಠಿಸಿದ್ದಾನೆ. ಹಾಗೆ ಮೂರು ಮತಗಳಾಗಿ ಸೃಷ್ಠಿಸಿರುವುದಕ್ಕೆ ಮೂರು ಮತಗಳ ಅವರಿಗು ಸ್ವಲ್ಪಮಟ್ಟಿನ ವ್ಯತ್ಯಾಸದಿಂದ, ಸ್ವಲ್ಪ ಹೆಚ್ಚು ಕಡಿಮೆಯಾಗಿ ತನ್ನ ಜ್ಞಾನವನ್ನು ತಿಳಿಸಿದ್ದಾನೆ. ದೇವರು ತನ್ನ ಜ್ಞಾನವನ್ನು ಮೂರು ಗ್ರಂಥಗಳಲ್ಲಿ ತುಂಬಿಕೊಟ್ಟಿದ್ದಾನೆ. ಮೂರು ಗ್ರಂಥಗಳಲ್ಲಿ ಜ್ಞಾನ ಸಮಾನವಾಗಿದ್ದರೂ, ಆ ಗ್ರಂಥಗಳಲ್ಲಿ ಬೆರೆತಿರುವ ಪದಾರ್ಥಗಳು ಬೇರೆಬೇರೆಯಾಗಿ ಇರುವುದರಿಂದ, ಯಾರ ರುಚಿ ಅವರದು ಎಂಬಂತೆ, ಯಾರ ಜ್ಞಾನ ಅವರದೆ ಆಗಿದೆ. ಎಲ್ಲಾರ ಜ್ಞಾನ ಒಂದೇ ಎಂದು ತಿಳಿಯಲಾರದೆಹೋಗುತ್ತಿದ್ದಾರೆ. ಮೂರು ಮತಗಳಲ್ಲಿ ಮನುಷ್ಯರು ಒಂದೇಜಾತಿಯವರೇ, ಮೂರು ಮತಗಳಲ್ಲಿನ ಜ್ಞಾನ ಒಂದೇ ಜ್ಞಾನವೇ. ಆದರೂ ಮನುಷ್ಯರು ನಾನು ಮುಸ್ಲಿಮ್, ನೀನು ಹಿಂದೂ, ಅವನು ಕ್ರೈಸ್ತನು ಎಂದು ಬೇರೆಬೇರೆ ಬೇಧಗಳು ಹೊಂದಿ ಪ್ರವರ್ತಿಸುತ್ತಿದ್ದಾರೆ. ಮನುಷ್ಯರನ್ನನುಸರಿಸಿ ಗ್ರಂಥಗಳಲ್ಲಿ ಜ್ಞಾನವೂ ಕೂಡ ಹಾಗೆ ಇದೆಯೆಂದುಕೊಳ್ಳುತ್ತಿದ್ದಾರೆ. ಜ್ಞಾನವನ್ನು ಬೇಧದಿಂದ ನೋಡುವುದರಿಂದ ಅವರ ಮತ ಬೇರೆ, ನಮ್ಮ ಮತ ಬೇರೆಯೆಂಬ ಅಭಿಪ್ರಾಯ ಬಂದಿದೆ. ಕೊನಗೆ ಗ್ರಂಥಗಳಲ್ಲಿನ ವಿಷಯ ಅರ್ಥವಾಗ

ದಿರುವುದರಿಂದ, ಸ್ವಮತದ ಮೇಲೆ ಅಭಿಮಾನ ಬೆಳೆದು ಹೋಗಿ, ಪರಮತದ ಮೇಲೆ ದುರಭಿಮಾನ ಹೆಚ್ಚಾಗಿಹೋಗಿದೆ. ಅದರಿಂದ ಕೆಲವರಲ್ಲಿ ಪರಮತವನ್ನು ಹಿಂಸಿಸಬೇಕೆಂಬ ಬುದ್ಧಿ ಹುಟ್ಟಿದೆ. ಮತ್ತೆ ಕೆಲವರಲ್ಲಿ ಸ್ವಮತವನ್ನು ಬೆಳೆಸಬೇಕೆಂಬ ಯೋಚನೆ ಬಂದಿದೆ. ಈ ಎರಡು ಯೋಚನೆಗಳಿಂದ ಎಲ್ಲರೂ ಇತರ ಮತಗಳ ಮೇಲೆ ದ್ವೇಷ ಬೆಳೆಸಿಕೊಳ್ಳುತ್ತಾ ಬಂದಿದ್ದಾರೆ. ಕೊನೆಗೆ ಮುಸ್ಲಿಮ್‌ರು ಜೀಹಾದ್ ಎಂಬ ಹೆಸರಿನಿಂದ ಇತರ ಮತದವರನ್ನು ಇಲ್ಲದಹಾಗೆ ಮಾಡಬೇಕೆಂದು ಕೊಂಡಿದ್ದಾರೆ. ಅದಕ್ಕೆ ಜೊತೆಯಾಗಿ **9ನೇ ಸೂರಾ 5ನೇ ಆಯತ್‌ನಲ್ಲಿಯೇ** ದೇವರು ಹೇಳಿದ ವಾಕ್ಯ ಅರ್ಥವಾಗದೆ ಅಪಾರ್ಥವಾಗಿ ಹೋಗಿದೆ. ಅದರಿಂದ ದೇವರೇ ಸಾಯಿಸೆಂದು ಹೇಳಿದ್ದಾನೆಂದು ಅರ್ಥವಾಗುವುದರಿಂದ, ಜೀಹಾದ್‌ಗೆ (ಪವಿತ್ರಯುದ್ಧಕ್ಕೆ) ಲೈಸೆನ್ಸ್ ದೊರೆತಂದಾಗಿದೆ. ಅಲ್ಲಿಗೆ ಮುಸ್ಲಿಮ್ ಹಿರಿಯರು ತಪ್ಪುದಾರಿಯನ್ನು ಸಾಧಾರಣ ಮುಸ್ಲಿಮರಿಗೆ ತೋರಿಸಿ, ಇದೇ ದೇವರಮಾರ್ಗ ವೆಂದು ಬೋಧಿಸುವುದರಿಂದ, ಭೂಮಿಮೇಲೆ ಮತದ್ವೇಷಗಳ ಮೂಲಕ ಹಿಂಸೆ ಬೆಳೆದುಹೋಗಿದೆ. ಈ ದಿನ ಎಲ್ಲಿ ಯುದ್ಧ ನಡೆದರೂ, ಕಲಹಗಳಿಂದ ಹಿಂಸೆ ನಡೆದರೂ, ಎಲ್ಲಿ ಕಾರುಬಾಂಬು ಸ್ಫೋಟಗೊಂಡರೂ, ಎಲ್ಲಿ ಒಬ್ಬನ ಆತ್ಮಾಹುತಿ ದಾಳಿಯಿಂದ ಹೆಚ್ಚು ಜನರು ಮರಣಿಸಿದರು, ಅಲ್ಲಿ ಮತದ್ವೇಷಕ್ಕೆ ಸಂಬಂಧಿಸಿದ ಕಾರಣವೇ ಕಾಣಿಸುತ್ತದೆ. ಮುಸ್ಲಿಮರಲ್ಲಿ ಉಗ್ರವಾದ ಭೂತಗಳಿರುವಂತೆ ಹೇಳಿಕೊಳ್ಳುವ ಹಿಂದೂಗಳಲ್ಲಿ ಸಹ ಮತವಾದ ದೆವ್ವ ತೂರಿಕೊಂಡು, ಎಲ್ಲಿ ಜ್ಞಾನ ಪ್ರಚಾರ ನಡೆಯುತ್ತಿದ್ದರೂ ಅಲ್ಲಿ ಇದು ಹಿಂದೂಗಳದಾ ಅಥವಾ ಇತರ ಮತದವರದಾ ಎಂದು ಆಲೋಚಿಸದೆ, ಅಲ್ಲಿನ ಪ್ರಚಾರಕರನ್ನು ಪರಮತ ಪ್ರಚಾರಕರೆಂದು ಹೆಸರಿಟ್ಟು ಹಿಂಸಿಸುತ್ತಿದ್ದಾರೆ. ಇಲ್ಲಿ ನಡೆಯುತ್ತಿರುವುದು ಹಿಂದೂ ಜ್ಞಾನ ಪ್ರಚಾರವೇ ಅಲ್ಲವೆ! ಎಂದು ಯಾರಾದರೂ ಮತವಾದ ದೆವ್ವ ಹಿಡಿದವರನ್ನು ಕೇಳಿದರೆ, ಮನೆಮನೆ ತಿರುಗಿ ಪ್ರಚಾರ ಮಾಡುವುದು ಕ್ರೈಸ್ತರೆ ಎನ್ನುತ್ತಾರೆ. ಅವರ ಲೆಕ್ಕದಲ್ಲಿ ಮನೆಮನೆ ತಿರುಗಿ ಹಿಂದೂಗಳು ಪ್ರಚಾರ ಮಾಡಬಾರ ದೆಂಬುದಲ್ಲವೆ ಅರ್ಥ. ಮನೆಮನೆ ತಿರುಗಿ ಪ್ರಚಾರ ಮಾಡುವವರೆಲ್ಲರೂ ಕ್ರೈಸ್ತರೆ ಆಗುತ್ತಾರಾ?

ಎಲ್ಲಿಯಾದರೂ ಉಚಿತವಾಗಿ ಗ್ರಂಥಗಳು ಹಂಚಿದರೆ, ಅದರಲ್ಲಿನ ಜ್ಞಾನ ನೋಡದೆಯೆ, ಉಚಿತವಾಗಿ ಹಂಚುವುದು ಕ್ರೈಸ್ತರೆ ಎಂದು ಅನ್ನುತ್ತಿದ್ದಾರೆ. ಉಗ್ರವಾದ ಭೂತ ಹಿಡಿದ ಮುಸ್ಲಿಮ್‌ರು ಹಿಂದೂಗಳಮೇಲೆ ಬಾಂಬು ಹಾಕಿದರೆ ಕೆಲವರೆ ಮರಣಿಸುತ್ತಾರೆ. ಆದರೆ ಮತವಾದ ದೆವ್ವ ಹಿಡಿದ ಹಿಂದೂಗಳು ಮಾಡುವ ಜ್ಞಾನಪ್ರಚಾರ ಆತಂಕಗಳಿಗೆ, ಕೆಲವು ನೂರಾರುಜನರು ಹಿಂದೂಗಳ ಹೃದಯಗಳು ಮರಣಿಸುತ್ತಿವೆ. ಹಿಂದೂ ಮತದೆವ್ವ ಆವಹಿಸಿದವರು ಮಾಡುವ ಆತಂಕಗಳಿಗೆ, ದಾಳಿಗಳಿಗೆ ಕೆಲವು ಸಾವಿರಾರುಜನ ಮಾನಸಿಕವಾಗಿ ಮರಣಿಸಿ, ಹಿಂದೂಮತವನ್ನು  ಬಿಟ್ಟು ಇತರ ಮತದೊಳಗೆ ಹೋಗುತ್ತೇವೆ ಅಂದು ಕೊಳ್ಳುತ್ತಿದ್ದಾರೆ. ಹಿಂದೂಮತದಲ್ಲಿನ ಅಂಟಬಾರದತನಕ್ಕೆ ಅಗ್ರವರ್ಣದವರು ಮಾಡುವ ದೊಡ್ಡಸ್ತಿಕೆಗೆ, ದೈವಜ್ಞಾನ ತಿಳಿಯದಹಾಗೆ ಪರಮತವೆಂದು ಅಡ್ಡಿಪಡಿಸುವುದನ್ನು ನೋಡಿ, ಈ ಮತದಲ್ಲಿದ್ದರೆ ಎಂದಿಗೂ ದೇವರ ಜ್ಞಾನ ತಿಳಿಯದೆಂಬ ನಿಶ್ಚಯಕ್ಕೆ ಬಂದು, ಇತರಮತಗಳೊಳಗೆ ಹೋಗಿ ಅಲ್ಲಿ ಸ್ವಲ್ಪ ಜ್ಞಾನವನ್ನು ತಿಳಿದುಕೊಂಡವರು ಇದ್ದಾರೆ. ವಿಜಯನಗರ ಜಿಲ್ಲೆಯಲ್ಲಿ ಒಬ್ಬ ಹಿಂದೂವು ಹಿಂದೂಮತದಲ್ಲಿ ಜ್ಞಾನ ತಿಳಿಯಲಿಲ್ಲವೆಂದು ಇಸ್ಲಾಮ್ (ಮುಸ್ಲಿಮ್) ಮತದೊಳಗೆ ಹೋಗಿದ್ದಾನೆ. ಅಲ್ಲಿ ತನಗೆ ಜ್ಞಾನ ಏನು ಅರ್ಥವಾಗಲಿಲ್ಲವೆಂದು ತಿರುಗಿ ಅಲ್ಲಿಂದ ಕ್ರೈಸ್ತದೊಳಗೆ ಹೋಗಿದ್ದಾನೆ. ಕ್ರೈಸ್ತ ಮತದೊಳಗೆ ಹೋಗದಮುಂಚೆಯೇ ನನಗೆ ಜ್ಞಾನ ತಿಳಿದರೆ ನಿಮ್ಮ ಮತದಲ್ಲಿ ಇರುತ್ತೇನೆ ಇಲ್ಲದಿದ್ದರೆ ನಿಮ್ಮ ಮತದಲ್ಲಿ ಸಹ ಇರುವುದಿಲ್ಲವೆಂದು ಹೇಳಿ ಒಪ್ಪಂದ ಮಾಡಿಕೊಂಡು ಕ್ರೈಸ್ತಮತದೊಳಗೆ ಹೋಗಿದ್ದಾನೆ. ಆ ವ್ಯಕ್ತಿ 2009ನೇ ವರ್ಷ ವಿಶಾಖಪಟ್ಟಣದ ಹತ್ತಿರ ಅಗನಂಪೂಡಿ ಗ್ರಾಮದಲ್ಲಿ ನನ್ನಜೊತೆ ಬೇಟಿಯಾದಾಗ, ಆತನು ನನ್ನ ಜೊತೆ ಬಹಳ ಸಮಯ ಮಾತನಾಡಿದ್ದಾನೆ. ಆತನ ಹೆಸರು ಕ್ರಿಯೇಟರ್ ಪ್ರೇಮಕುಮಾರ್ ಎಂದು ಇದೆ. ಆ ದಿನ ನಮ್ಮ ಮಧ್ಯದಲ್ಲಿ ನಡೆದ ಸಂಭಾಷಣೆಯಲ್ಲಿ ಸಾಧಾರಣ ಹಿಂದೂಗಳ ಮನೊಭಾವಗಳು ಹೇಗೆ ಇವೆಯೋ ನನಗೆ ಚೆನ್ನಾಗಿ ಅರ್ಥವಾಗಿದೆ. ಆ ಸಂಭಾಷಣೆಯನ್ನು ಕೆಳಗೆ ಬರೆಯುತ್ತಿದ್ದೇವೆ ನೋಡಿರಿ.

**ಪ್ರೇಮ್ :–** ಸ್ವಾಮೀಜಿ! ನಿಮ್ಮನ್ನು ಬೇಟಿಯಾಗಿ ಮಾತನಾಡಬೇಕೆಂದು ಬಂದಿದ್ದೇನೆ.

**ನಾನು :–** ನೀವು ಯಾರೊ ನನಗೆ ತಿಳಿಯದು. ನೀವು ಯಾವುದಕ್ಕೋಸ್ಕರ ಬಂದಿದ್ದೀರಾ?

**ಪ್ರೇಮ್ :–** ವಿಜಯನಗರದಲ್ಲಿ ನಿಮ್ಮನ್ನು ಕುರಿತು ನಿಮ್ಮ ಭಕ್ತರು ಹೇಳುತ್ತಿದ್ದರೆ ಕೇಳಿದ್ದೇನೆ. ನನ್ನಲ್ಲಿ ಕೆಲವು ಜ್ಞಾನಸಂಶಯಗಳಿವೆ, ಅವುಗಳನ್ನು ನಿಮ್ಮ ಹತ್ತಿರ ಹೇಳಿ ನನ್ನ ಸಂಶಯಗಳು ಬಗೆಹರಿಸಿಕೊಳ್ಳಬೇಕೆಂದುಕೊಂಡಿದ್ದೇನೆ. ಆದ್ದರಿಂದ ಅದೇ ಕೆಲಸವಾಗಿ ನೂರು ಕಿಲೋಮಿಟರ್‌ಗಳ ದೂರದಿಂದ ಬಂದಿದ್ದೇನೆ.

**ನಾನು :–** ನಿಮ್ಮ ಸಂಶಯಗಳಿಗೆ ನನ್ನ ಹತ್ತಿರ ಉತ್ತರ ಇಲ್ಲದಿರಬಹುದು. ನನಗೆ ಜ್ಞಾನ ಸಂಪೂರ್ಣವಾಗಿ ತಿಳಿದಿದೆಯೆಂದು ನನಗೆ ನಂಬಿಕೆಯಿಲ್ಲ. ಅಷ್ಟಕ್ಕು ನೀನು ಏನು ಕೆಲಸ ಮಾಡುತ್ತಿರುತ್ತೀಯಾ. ನಿನ್ನ ಹೆಸರೇನು?

**ಪ್ರೇಮ್ :–** ನನ್ನ ಹೆಸರು ಪ್ರೇಮಕುಮಾರ್ ಆದರೆ ಎಲ್ಲರೂ ಕ್ರಿಯೇಟರ್ ಪ್ರೇಮ್‌ಕುಮಾರ್ ಎಂದು ಕರೆಯುತ್ತಾರೆ. ನಾನು ಪ್ರಸ್ತುತ ಪಾಸ್ಟರ್ ಆಗಿ ಟ್ರೈನಿಂಗ್ ತೆಗೆದುಕೊಂಡು ಪಾಸ್ಟರ್ ಆಗಿ ಕೆಲಸ ಮಾಡುತ್ತಿದ್ದೇನೆ.

**ನಾನು:–** ಪಾಸ್ಟರ್ ಎಂದರೆ ಕ್ರೈಸ್ತವ ಬೋಧಕನಾಗಿ ಕೆಲಸಮಾಡುತ್ತಿದ್ದೀಯಾ?

**ಪ್ರೇಮ್ :–** ಹೌದು, ಕ್ರೈಸ್ತವ ಬೋಧಕನಾಗಿದ್ದೇನೆ. ನಾನು ಮೊದಲು ಹಿಂದೂವೇ. ಕೆಲವು ವರ್ಷಗಳ ಕೆಳಗೆ ಕ್ರೈಸ್ತಮತದೊಳಗೆ ಬಂದಿದ್ದೇನೆ.

**ನಾನು :–** ಗುಂಟೂರಿನಿಂದ ಪ್ರಾರಂಭಿಸಿದರೆ ಶ್ರೀಕಾಕುಳಮು ಜಿಲ್ಲೆಯವರೆಗು ಹಿಂದೂಗಳೆಲ್ಲರೂ ಸುಮಾರು ಶೇಕಡ 80 ರಷ್ಟು ಮಂದಿ ಕ್ರೈಸ್ತರಾಗಿ ಬದಲಾಗಿಹೋಗಿದ್ದಾರೆ ಅಂದುಕೊಳ್ಳುತ್ತೇನೆ. ಅದರಲ್ಲಿ ನೀನು ಸಹ ಇದ್ದೀಯಾ. ನಾನಿರುವ ರಾಯಲಸೀಮ ಪ್ರಾಂತದಲ್ಲಿ 30 ರಿಂದ 40 ರಷ್ಟು ಮಾರ್ಪಟ್ಟಿದ್ದಾರೇನೋ ಆಗಲಿ, ಈ ಪ್ರಾಂತದಲ್ಲಿ ಮತ್ತಷ್ಟು ಹೆಚ್ಚಾಗಿ ಮತವನ್ನು ಬದಲಿಸಿಕೊಂಡಿದ್ದಾರೆ. ಇಲ್ಲಿ ಅಷ್ಟು ಹೆಚ್ಚಾಗಿ ಮತ ಬದಲಾಯಿಸಲು

ಕಾರಣವೇನು? ಮೊದಲು ನೀನು ಏನು ಲಾಭವನ್ನು ಆಶಿಸಿ ಮತವನ್ನು ಬದಲಿಸಿದ್ದೀಯಾ?

**ಪ್ರೇಮ್ :–** ನಾನು ಏನೋ ಲಾಭ ಬರುತ್ತದೆಂಬ ಆಸೆಯಿಂದ ಮತವನ್ನು ಬದಲಾಯಿಸಿಕೊಳ್ಳಲಿಲ್ಲ. ನಾನು ದೇವರಿಗೋಸ್ಕರ, ದೇವರ ಜ್ಞಾನಕ್ಕೋಸ್ಕರ ಮತವನ್ನು ಬದಲಿಸಿಕೊಳ್ಳಬೇಕಾಗಿ ಬಂದಿದೆ. ಇತರರ ವಿಷಯವು ನನಗೆ ತಿಳಿಯದಾಗಲಿ ನನ್ನ ವಿಷಯದಲ್ಲಿ ಇದಕ್ಕಿಂತ ಬೇರೆ ಉದ್ದೇಶವೆ ಇಲ್ಲ.

**ನಾನು :–** ಎಲ್ಲದಕ್ಕಿಂತ ಮೊದಲು ಹುಟ್ಟಿರುವುದು ಹಿಂದೂಮತ, ಎಲ್ಲಾ ಗ್ರಂಥಗಳಿಗಿಂತ ಮೊದಲು ಭಗವದ್ಗೀತೆ ಬಂದಿದೆ. ಎಲ್ಲಾ ಮತಗಳ ಜ್ಞಾನಕ್ಕೆ ಆಧಾರವಾಗಿ ಹಿಂದೂ ಜ್ಞಾನವಿದೆ. ಅಂತಹದರಲ್ಲಿ ಪರಿಪೂರ್ಣವಾಗಿರುವ ಜ್ಞಾನವನ್ನು ಬಿಟ್ಟು ಇತರ ಮತದಲ್ಲಿನ ದೇವರಿಗೋಸ್ಕರ, ದೇವರ ಜ್ಞಾನಕ್ಕೋಸ್ಕರ ಹೋಗಿದ್ದೇನೆಂದು ಹೇಳುತ್ತಿದ್ದೀಯಾ. ಇಲ್ಲಿ ದೇವರೂ, ದೇವರ ಜ್ಞಾನವೂ ತಿಳಿಯಲ್ಪಡುವುದಿಲ್ಲವೆಂದು ಯಾರಾದರೂ ಹೇಳಿದ್ದಾರಾ? ಇತರ ಮತದೊಳಗೆ ಹೋದರೆ ದೇವರು ತಿಳಿಯಲ್ಪಡುತ್ತಾನೆಂದು ಹೇಳಿದ್ದಾರಾ? ಹಿಂದೂ ಮತಕ್ಕಿಂತ ಕ್ರೈಸ್ತಮತದಲ್ಲಿ ನಿನಗೆ ಏನು ದೊಡ್ಡದಾಗಿ ಕಾಣಿಸಿದೆ?

**ಪ್ರೇಮ್ :–** ನಾನು ಹಿಂದೂ ಮತವನ್ನು ಬಿಟ್ಟು ಹೋಗುವುದಕ್ಕೆ ನೀವು ಕೇಳಿರುವವೇನು ಕಾರಣವಲ್ಲ. ನಾನು ಹಿಂದೂ ಮತದಿಂದ ಮೊದಲು ಕ್ರೈಸ್ತಮತದೊಳಗೆ ಬರಲಿಲ್ಲ. ನಾನು ಕೆಲವು ವರ್ಷಗಳ ಕೆಳಗೆ ಮುಸ್ಲಿಮ್ ಮತವನ್ನು ಸ್ವೀಕರಿಸಿದ್ದೇನೆ. ನಂತರ ಮುಸ್ಲಿಮ್ ಮತದಿಂದ ಕ್ರೈಸ್ತ ಮತದೊಳಗೆ ಬಂದಿದ್ದೇನೆ. ಮುಸ್ಲಿಮ್ ಮತದೊಳಗಿಂತ, ಹಿಂದೂಮತ ದೊಳಗಿಂತ ಸ್ವಲ್ಪ ಹೆಚ್ಚಿನ ಸ್ಥಾನದಲ್ಲಿ ಈ ಮತದಲ್ಲಿ ಇದ್ದೇನೆ. ಎರಡು ಮತಗಳನ್ನು ಬದಲಾಯಿಸಿ ದರೂ ನಾನು ನನ್ನ ಲಾಭಕ್ಕೋಸ್ಕರವಾಗಲಿ, ಮತ್ತೆ ಯಾವ ಇತರ ಕೋರಿ ಕೆಗೋಸ್ಕರವಾಗಲಿ ಬದಲಾಗಲಿಲ್ಲ, ನಾನು ಜ್ಞಾನಾಭಿಲಾಷಿಯಾಗಿ ವಿಧಿಯಿಲ್ಲದೆ ಮತವನ್ನು ಬದಲಾಗಿದ್ದೇನೆ ಹೊರತು ಮತ್ತೆ ಯಾವ ಇತರೆ ಕಾರಣವೂ ಇಲ್ಲ.

ಈಗ ನಿಮ್ಮ ಹತ್ತಿರಕ್ಕೆ ಬಂದಿದ್ದೇನೆ. ನಾನು ಯಾವ ಪ್ರಪಂಚ ಲಾಭವನ್ನೂ ಕೋರಿ ನಿಮ್ಮ ಹತ್ತಿರಕ್ಕೆ ಬರಲಿಲ್ಲ ಅಲ್ಲವೆ! ನನಗೆ ಬಾಯಾರಿಕೆಯಾಗಿದೆ, ನನ್ನ ಬಾಯಾರಿಕೆ ತೀರುವುದಕ್ಕೆ ನೀರು ಕುಡಿದಿದ್ದೇನೆ. ನಾನು ಕುಡಿದ ನೀರು ಉಪ್ಪುನೀರು ಅದರಿಂದ ಬಾಯಾರಿಕೆ ತೀರಲಿಲ್ಲವಾಗಲಿ ಮತ್ತಷ್ಟು ಬಾಯಾರಿಕೆಯಾಗಿದೆ. ಒಳ್ಳೆಯ ನೀರಿಗೋಸ್ಕರ ಇತರರನ್ನು, ಇತರ ಮತಗಳನ್ನು ಆಶ್ರಯಿಸಿದ್ದೇನೆ. ಎಲ್ಲಿಯೂ ಒಳ್ಳೆಯ ನೀರು ದೊರೆಯಲಿಲ್ಲ. ಮುಸ್ಲಿಮ್ ಮತದಲ್ಲಿ ಸಹ ಅಸಂತೃಪ್ತಿ ಹೊಂದಿ, ಕ್ರೈಸ್ತಮತದೊಳಗೆ ಬಂದಿದ್ದೇನೆ.

**ನಾನು :–** ಇಲ್ಲಿಯಾದರೂ ನಿನ್ನ ದಾಹ ತೀರಿದೆಯಾ?

**ಪ್ರೇಮ್ :–** ಇಲ್ಲಿ ಕ್ರೈಸ್ತ ಮತದಲ್ಲಿ ನನಗೆ ಒಂದು ಬಿಂದಿಗೆ, ಒಂದು ಗ್ಲಾಸು ಕೊಟ್ಟಿದ್ದಾರೆ. ನೀವು ಕುಡಿಯುವುದೆ ಅಲ್ಲದೆ ನಿನ್ನ ಹತ್ತಿರಕ್ಕೆ ಬಂದವರಿಗೂ ಸಹ ನೀರನ್ನು ಕುಡಿಸೆಂದು ಹೇಳಿದ್ದಾರೆ. ಈಗ ನಾನು ಇತರರಿಗೆ ಕುಡಿಸುವ ಜವಬ್ದಾರಿಯಲ್ಲಿದ್ದೇನೆ.

**ನಾನು :–** ಇಲ್ಲಿ ಕ್ರೈಸ್ತದಲ್ಲಿ ಆದರೂ ಮೊದಲು ನಿನ್ನ ದಾಹ ತೀರಿದೆಯಾ, ನೀನು ಇತರರಿಗೆ ದಾಹವನ್ನು ತೀರಿಸಿದ್ದೀಯಾ?

**ಪ್ರೇಮ್ :–** ನನಗೆ ಒಂದು ದೊಡ್ಡ ಸಮುದ್ರವನ್ನು ತೋರಿಸಿ ನಿನ್ನ ಇಷ್ಟಬಂದಷ್ಟು ನೀರು ನೀನು ಕುಡಿ ಮತ್ತು ಇತರರಿಗೂ ಸಹ ಕುಡಿಸೆಂದು ಹೇಳಿದ್ದಾರೆ. ಸಮುದ್ರವನ್ನು ನೋಡಿ ಅದು ಎಷ್ಟು ದೊಡ್ಡದಾಗಿದ್ದರೂ ಅದರಲ್ಲಿ ಸಹ ಉಪ್ಪುನೀರೆ ಅಲ್ಲವೆ ಇರುವುದು! ಎಂದು ಅನುಮಾನ ಬಂದಿದೆ. ಏನು ಅರ್ಥವಾಗದೆ ನಿಮ್ಮ ಹತ್ತಿರಕ್ಕೆ ಬಂದಿದ್ದೇನೆ.

**ನಾನು :–** ದೇವರು ಶ್ರದ್ಧೆಯನ್ನನುಸರಿಸಿ ಜ್ಞಾನ ದೊರೆಯುತ್ತದೆಂದು ಹೇಳಿದ್ದಾನೆ. ನಿನಗಿರುವ ಶ್ರದ್ಧೆಯನ್ನನುಸರಿಸಿ ಜ್ಞಾನ ಲಭಿಸಬೇಕು. ನಿನಗೆ ಸರಿಯಾದ ಜ್ಞಾನ ಲಭಿಸಲಿಲ್ಲವೆಂದರೆ ನಿನ್ನಲ್ಲಿಯೇ ಶ್ರದ್ಧಾಲೋಪವಿದೆಯೆಂದು ಅರ್ಥವಾಗುತ್ತಿದೆ.

**ಪ್ರೇಮ್ :–** ನನಗೆ ಶ್ರದ್ಧೆಯಲ್ಲಿ ಲೋಪವಿಲ್ಲ. ಜ್ಞಾನದ ಮೇಲೆ ಶ್ರದ್ಧೆಯಿದೆ ಆದ್ದರಿಂದ, ಅದಕ್ಕೋಸ್ಕರ ಮತವನ್ನು ಸಹ ಬದಲಾಯಿಸಿದ್ದೇನೆ.

**ನಾನು :–** ನಿನಗೆ ಶ್ರದ್ಧೆಯಿದೆಯೆಂಬ ನಂಬಿಕೆ ಇದ್ದರೆ ತಪ್ಪದೆ ಸರಿಯಾದ ಜ್ಞಾನ ಲಭಿಸುತ್ತದೆ. ಅಂತಹ ಶ್ರದ್ಧೆ ಇರುವಾಗ ಹಿಂದೂಮತದಲ್ಲಿಯೇ ಇದ್ದರೆ ಕೊನಗೆ ಜ್ಞಾನ ಲಭಿಸುತ್ತಿತ್ತು ಅಲ್ಲವೆ!

**ಪ್ರೇಮ್ :–** ನೀವು ಹೇಳಿದ ಮಾತು ಸತ್ಯವೇ ಆಗಿರಬಹದು. ಆದರೆ ನಾನು ಎಂತಹ ಪರಿಸ್ಥಿತಿಯಲ್ಲಿ ಮತ ಬದಲಿಸಿದ್ದೇನೊ ನಿಮಗೆ ಸ್ವಲ್ಪ ವಿವರವಾಗಿ ಹೇಳುತ್ತೇನೆ. ನಂತರ ನನ್ನದೇನಾದರೂ ತಪ್ಪಿದ್ದರೆ ಹೇಳಿರಿ. ನನಗೆ ಹೈಸ್ಕೂಲು ಓದು ಮುಗಿದುಹೋದ ನಂತರ ಕಾಲೇಜು ಹೋಗುವುದಕ್ಕೆ ಒಂದು ವರ್ಷ ಆಲಸ್ಯವಾಗಿದೆ ಆಗಲೇ ದೇವರು, ದೇವರ ಜ್ಞಾನದಮೇಲೆ ಹೆಚ್ಚು ಆಸಕ್ತಿ ಉಂಟಾಗಿದೆ. ನಂತರ ಕಾಲೇಜು ಮುಗಿದುಹೋದ ನಂತರ ಸ್ವಲ್ಪ ಕಾಲಕ್ಕೆ ಭಗವದ್ಗೀತೆಯನ್ನು ತಂದುಕೊಂಡು ಓದಬೇಕೆಂದುಕೊಂಡೆನು. ಆದರೆ ಆದಿಯಲ್ಲಿಯೇ (ಹಂಸಪಾದು) ಎನ್ನುವಂತೆ ನಮ್ಮ ಮನೆಗೆ ಬಂದಿರುವ ಬ್ರಾಹ್ಮಣನು ಭಗವದ್ಗೀತೆಯನ್ನು ಮನೆಯಲ್ಲಿ ಇಟ್ಟುಕೊಂಡರೆ ಒಳ್ಳೆಯದಲ್ಲ ಅದನ್ನು ಗುಡಿಯಲ್ಲಿ ಇಡಬೇಕು ಇಲ್ಲದಿದ್ದರೆ ದೇವರಮೂಲೆಯಲ್ಲಿ ಇಟ್ಟು ಪೂಜಿಸಬೇಕಾಗಲಿ, ಓದಬಾರದೆಂದು, ಓದಿದರೆ ಹೊಡೆದಾಟಗಳು ಬರುತ್ತವೆಂದು, ಸಂಸಾರ ಕ್ಷೀಣಿಸಿ ಹೋಗುತ್ತದೆಂದು ಹೇಳಿದ್ದಾನೆ. ಆತನ ಮಾತನ್ನು ಕೇಳಿದ ನಮ್ಮ ಮನೆಯಲ್ಲಿರುವವರು ನಾನು ಭಗವದ್ಗೀತೆಯನ್ನು ಓದಬಾರದೆಂದು ಹೇಳಿ, ಭಗವದ್ಗೀತೆಯನ್ನು ಬ್ರಾಹ್ಮಣನಿಗೆ ದಾನ ಕೊಟ್ಟರು. ನಂತರ ಇನ್ನೊಂದು ಭಗವದ್ಗೀತೆಯನ್ನು ಕಳ್ಳತನದಿಂದ ತಂದುಕೊಂಡು, ಯಾರಿಗೂ ತಿಳಿಯದಹಾಗೆ ಓದುತ್ತಿದ್ದೆನು. ಆದರೆ ಅದರಲ್ಲಿನ ವಿಷಯಗಳು ಯಾವು ಸರಿಯಾಗಿ ಅರ್ಥವಾಗಲಿಲ್ಲ. ಎಲ್ಲಿಗೆ ಹೋಗಿ ಕೇಳಬೇಕೆಂದುಕೊಂಡರು ಕೇಳುವುದಕ್ಕೆ ಅವಕಾಶವೇ ಕೊಡುತ್ತಿರಲಿಲ್ಲ. ಎಲ್ಲಿಯಾದರೂ ಅವಕಾಶ ದೊರೆತರೆ ಕೇಳಿರುವುದಕ್ಕೆ ಸರಿಯಾದ ಸಮಾಧಾನ ಕೊಡುತ್ತಿರಲಿಲ್ಲ. ಗೀತೆಯನ್ನು ಓದಿದರೆ ಎಷ್ಟೋ

ಸಂಶಯಗಳು ಬಂದಿವೆ. ಆದರೆ ಒಂದಕ್ಕೂ ಸಹ ಹೊರಗೆ ಗುರುಗಳ ಹತ್ತಿರ ಉತ್ತರ ಸಿಗಲಿಲ್ಲ. ಉತ್ತರ ಸಿಗದಿರುವುದೇ ಅಲ್ಲದೆ ಹೀಗೆ ಪ್ರಶ್ನಿಸಬಾರದೆಂದು ಸುಮ್ಮನಿರಿಸುತ್ತಿದ್ದರು. ಆಗ ನನಗಿರುವ ಸಂಶಯಗಳನ್ನು ಕೇಳುವುದು ತಪ್ಪಾ! ಎಂದು ಘರ್ಷಣೆಪಡುವುದು ಸಹ ನಡೆದಿದೆ. ಎಲ್ಲಿಗೆ ಹೋದರೂ ನೀನು ಹರಿಜನಾಂಗದವನು, ಅಂಟಬಾರದವನು ದೂರವಾಗಿರು ಎಂದು ಅನ್ನುತ್ತಿದ್ದರು. ಕೊನಗೆ ಒಬ್ಬ ಗುರುವು ನೀನು ಸೇವೆಮಾಡಿಕೊಳ್ಳುತ್ತಾ ಇರಬೇಕಾಗಿದ್ದೇ ಜ್ಞಾನಕ್ಕೆ ಆರ್ಹನು ಅಲ್ಲ ಅಂದನು. ಅಲ್ಲಿಗೆ ಹಿಂದೂ ಮತದಲ್ಲಿ ನನಗೆ ಜ್ಞಾನ ತಿಳಿಯುವುದಿಲ್ಲ ಎಂದು ನಿಶ್ಚಯಕ್ಕೆ ಬಂದೆನು. ಆಗಿನಿಂದ ಹಿಂದೂಮತದ ಮೇಲೆ ಅಸಹ್ಯ ಉಂಟಾಯಿತು.

ಆಗಿನಿಂದ ಹಿಂದೂ ಗುರುಗಳ ಬಳಿಗೆ ಹೋಗುವುದು ಬಿಟ್ಟಿದ್ದೇನೆ. ಕ್ರೈಸ್ತ ಸಭೆಗಳಲ್ಲಿ ಹೇಳುವ ಕ್ರೈಸ್ತ ಬೋಧನೆಗಳನ್ನು ಕೇಳುವುದಕ್ಕೆ ಹೋಗುತ್ತಿದ್ದೇನೆ. ಕ್ರೈಸ್ತ ಗುರುಗಳ ಹತ್ತಿರವಾದರೂ ಜ್ಞಾನ ಲಭಿಸುತ್ತದೆಂಬ ಆಸೆಯಿಂದ ಅಲ್ಲಿಗೆ ಹೋಗಿದ್ದೇನೆ. ನಾನು ಐದು ಸಭೆಗಳಿಗೆ ಹಾಜರಾಗಿದ್ದೇನೆ ಅದರಲ್ಲಿ ದೊಡ್ಡದಾಗಿ ನಡೆದ ಎರಡು ಸಭೆಗಳಲ್ಲಿ ಅವರು ಹೇಳುವ ಬೋಧನೆಗಳನ್ನು ಕೇಳಿದ್ದೇನೆ. ಉಳಿದ ಮೂರುಕಡೆ ಹಿಂದೂಗಳಲ್ಲಿ ವಿಶ್ವಹಿಂದೂ ಪರಿಷತ್‌ನವರು ಬಂದು ಸಭೆ ನಡೆಯದಂತೆ ಗಲಾಟೆ ಮಾಡಿಹೋಗಿದ್ದಾರೆ. ಅಲ್ಲಿಗೆ ಹೋದವರೆಲ್ಲರನ್ನು ಓಡಿಸಿದರು. ಕಾಕಿನಾಡ ಹತ್ತಿರ ಒಬ್ಬ ಪಾಸ್ಟರ್‌ರವರು ಬೈಬಲ್ ಜ್ಞಾನವನ್ನು ಚೆನ್ನಾಗಿ ಹೇಳುತ್ತಾನೆಂದು ಕೇಳಿ ಅಲ್ಲಿಗೆ ಹೋಗಿ ತಿಳಿದುಕೊಳ್ಳಬೇಕೆಂದು ಕೊಂಡಿದ್ದೇನೆ. ಒಂದು ದಿನ ಹಾಗೆಯೇ ಹೋಗಿದ್ದೇನೆ. ಕಾಕಿನಾಡದಲ್ಲಿ ಸಹ ಹಿಂದೂಗಳು ಬಂದು ಪೂರ್ತಿ ಮತದ್ವೇಷವನ್ನು ಪ್ರದರ್ಶಿಸಿ ನೀನು ಚರ್ಚಿ ಹೊರಗೆ ಬೋಧನೆಗಳು ಹೇಳಿದರೆ ಸಾಯಿಸಿಹಾಕುತ್ತೇವೆ ಎಂದು ಹೆದರಿಸಿ ಹೋಗಿದ್ದಾರೆ. ಅದರಿಂದ ಆ ಬೋಧಕನು ಚರ್ಚಿಗೇ ಪರಿಮಿತವಾಗಿದ್ದಾನೆ. ಆ ದಿನ ಪ್ರತ್ಯಕ್ಷವಾಗಿ ನನ್ನ ಮುಂದೆಯೇ ಪಾಸ್ಟರವರನ್ನು ನಿಂದಿಸಿದನ್ನು, ಹಾಗೆಯೇ ಅಲ್ಲಿಗೆ ಹೋಗಿರುವ ನಮ್ಮನ್ನು ಬೈಯ್ದ ಬೈಗಳನ್ನು ನೋಡಿ ಹಿಂದೂಗಳಲ್ಲಿನವರು

ಪೂರ್ತಿ ರಾಕ್ಷಸರಾಗಿ ಕಾಣಿಸಿದ್ದಾರೆ. ಇಂತಹ ಇಷ್ಟು ನೀಚವಾದರಿರುವ ಮತದಲ್ಲಿ ನಾನಿದ್ದೀನಾ! ಅನಿಸಿದೆ. ತಕ್ಷಣ ಹಿಂದೂಮತವನ್ನು ಬಿಟ್ಟು ಹೊರಗೆ ಬಂದು ನಾನು ಹಿಂದೂ ಅಲ್ಲವೆಂದು ಅನಿಸಿಕೊಳ್ಳಬೇಕೆಂದುಕೊಂಡೆನು. ಆಗ ಕ್ರೈಸ್ತರ ಗುರುಗಳು ದೊಡ್ಡದಾಗಿ ಪರಿಚಯ ಇಲ್ಲದಿರುವುದರಿಂದ, ಕ್ರೈಸ್ತದೊಳಗೆ ಹೋದರೆ ಹಿಂದೂಗಳ ಅವರೋಧಗಳು ಹೆಚ್ಚಾಗಿವೆಯೆಂದು ಅನಿಸುವುದರಿಂದ, ಮುಸ್ಲಿಮ್‌ರ ತಂಟೆಗೆ ಯಾರೂ ಹೋಗುವುದಿಲ್ಲವೆಂದು ತಿಳಿದು, ಅದರಲ್ಲಿ ಎಷ್ಟೋ ಕ್ರಮಶಿಕ್ಷಣಾ ಭಕ್ತಿ ಇದೆಯೆಂದು ತಿಳಿದು, ತಡ ಮಾಡದೆ ಮುಸ್ಲಿಮ್ ಹಿರಿಯರ ಹತ್ತಿರ ಮಾತನಾಡಿ ನಾನು ಮುಸ್ಲಿಮಾಗಿ ಬದಲಾಗುವುದು ನಡೆದಿದೆ ಮುಸ್ಲಿಮ್ ಮತದಲ್ಲಿ ಸೇರಿ ಗಡ್ಡ ಬೆಳೆಸಿ ಪೂರ್ತಿ ಮುಸ್ಲಿಮಾಗಿ ಬದಲಾಗಿಹೋಗಿದ್ದೇನೆ. ಅಲ್ಲಿ ಹೆಚ್ಚಾಗಿ ಕ್ರಮಶಿಕ್ಷಣಾ ಭಕ್ತಿ ಇರುವುದು ವಾಸ್ತವವೇಯಾಗಲಿ ನನಗೆ ಅಲ್ಲಿ ಜ್ಞಾನ ಏನು ತಿಳಿಯಲಿಲ್ಲ. ದೇವರ ಪ್ರಾರ್ಥನೆ ಹೊರತು ಏನು ಅರ್ಥವಾಗಲಿಲ್ಲ.

ಅಲ್ಲಿ "ಏಕೇಶ್ವರೋಪಾಸನ" ಪ್ರಾರ್ಥನೆ ಹೊರತು ಏನು ಅರ್ಥವಾಗುತ್ತಿರಲಿಲ್ಲ. ಖುರ್‌ಆನ್ ಗ್ರಂಥವನ್ನು ಓದಿದರೆ ಸ್ವಲ್ಪವೂ ಅರ್ಥವಾಗಲಿಲ್ಲ. ಅಲ್ಲಿನ ಹಿರಿಯರನ್ನು ಕೇಳಿದರೆ ಖುರ್‌ಆನ್‌ಗಿಂತ ಮೊದಲು ಹದೀಸುಗಳನ್ನು ಓದೆಂದಿದ್ದಾರೆ. ಹದೀಸುಗಳು ಓದಿದ ನಂತರ ಖುರ್‌ಆನ್ ಓದಬೇಕೆಂದು ಹೇಳುವುದಲ್ಲದೆ ಖುರ್‌ಆನ್ ಓದದಿದ್ದರೂ ಫರವಾಗಿಲ್ಲ, ಹದೀಸುಗಳನ್ನು ಓದಲೇ ಬೇಕೆಂದು ಹೇಳಿದ್ದಾರೆ. ಖುರ್‌ಆನ್ ಹೆಂಗಸರು ತಪ್ಪದೇ ಓದಬೇಕೆಂದು, ಹದೀಸುಗಳು ಗಂಡಸರು ಓದಬೇಕೆಂದು ಹೇಳಿದ್ದಾರೆ. ಅವರ ಮಾತಿನ ಪ್ರಕಾರವೇ ಹದೀಸುಗಳು ಓದಿದ್ದೇನೆ. ಅದು ಮತಕ್ಕೆ ಸಂಬಂಧಿಸಿರುವುದೆ ಆಗಲಿ, ದೇವರಿಗೆ ಸಂಬಂಧಿರುವುದು ಅಲ್ಲವೆಂದು ತಿಳಿದಿದೆ. ಖುರ್‌ಆನ್ ವಿಷಯಕ್ಕೆ ಬಂದರೆ ಖುರ್‌ಆನ್ ಎಷ್ಟು ಓದಿದರೂ, ಅದರಲ್ಲಿ ದೈವಜ್ಞಾನ ಇದೆಯೆಂದು ತಿಳಿದಿದೆಯಾಗಲಿ ಅದೇನೊ ಅರ್ಥವಾಗಲಿಲ್ಲ. ನನ್ನ ಸಾಟಿಯವರನ್ನು ಕೇಳಿದರೆ ಅವರಿಗಿಂತ ನಾನೇ ಮೇಲೆನಿಸಿದೆ. ಸ್ವಲ್ಪಜನ ಹಿರಿಯರನ್ನು ಹುಡುಕಿ ಅವರ ಮೂಲಕ ಖುರ್‌ಆನ್‌ನಲ್ಲಿನ ವಿಷಯವನ್ನು ತಿಳಿದುಕೊಳ್ಳಬೇಕೆಂದುಕೊಂಡರೆ

ಅವರು ಹೇಳುವ ಜ್ಞಾನದಿಂದ ನಾನು ದ್ವಂದ್ವದಲ್ಲಿ ಬಿದ್ದುಹೋಗಿದ್ದೇನೆ. ಎರಡರಲ್ಲಿಂದ ಏಕದೊಳಗೆ ಬರಲಾರದೆಹೋಗಿದ್ದೇನೆ. **ದೇವರು ಏನು ಮಾಡೊದಿಲ್ಲ, ಆತನು ಏನನ್ನಾದರೂ ಆಗಿಹೋಗಲಿ ಎಂದರೆ ಆಗಿಹೋಗುತ್ತದೆಂದು"** ಒಂದುಕಡೆ ಹೇಳುತ್ತಾರೆ. ನಂತರ ಮತ್ತೊಂದು ಸಂದರ್ಭದಲ್ಲಿ **"ದೇವರು ಪ್ರಪಂಚವನ್ನು ಆರು ದಿನಗಳು ಶ್ರಮಪಟ್ಟು ಸೃಷ್ಠಿಸಿದ್ದಾನೆಂದು, ಏಳನೆ ದಿನ ದೇವರು ಸಿಂಹಾಸನವನ್ನೇರಿ ವಿಶ್ರಾಂತಿ ತೆಗೆದುಕೊಂಡಿದ್ದಾನೆಂದು"** ಅಂದಿದ್ದಾರೆ. ಆಗ ದೇವರು ಕೆಲಸ ಮಾಡುತ್ತಾನಾ? ಮಾಡುವುದಿಲ್ಲವಾ? ಎಂದು ಕೇಳಿದರೆ ಆ ಹಿರಿಯರು ಸಹ ಯಾವಕಡೆ ತೀರ್ಮಾನಿಸಿ ಹೇಳಲಾರದೆಹೋಗುತ್ತಿದ್ದಾರೆ. ಆಗ ನನಗೆ ಚೆನ್ನಾಗಿ ಅರ್ಥವಾಗಿರುವುದೇನೆಂದರೆ, ಇದೇ ಮತದಲ್ಲಿ ಹುಟ್ಟಿ ಬೆಳೆದ ಹಿರಿಯರಿಗೇ ಏನು ತಿಳಿಯದೆಹೋದರೆ, ನಿನ್ನೆಅಲ್ಲದೆ ಮೊನ್ನೆ ಬಂದಿರುವ ನನಗೇನು ತಿಳಿಯುತ್ತದೆ! ಎಂದು ಅರ್ಥವಾಗಿದೆ. ಮುಸ್ಲಿಮ್ ಮತದಲ್ಲಿ ಸಹ ನನಗೆ ಏನು ಅರ್ಥವಾಗದೆ, ನಾನು ಯಾವಾಗ ಜ್ಞಾನವನ್ನು ತಿಳಿದುಕೊಳ್ಳುತ್ತೇನೆಂಬ ತಪನೆ ಒಂದುಕಡೆ ಹೆಚ್ಚಾಗಿ, ಇನ್ನು ಜ್ಞಾನ ತಿಳಿಯುವುದಿಲ್ಲವೇನೊ ಎಂಬ ಬಾಧೆ ಒಂದುಕಡೆ ಪೀಡಿಸುತ್ತಿತ್ತು. ಈ ಅಸಂತೃಪ್ತಿ ಮಧ್ಯೆ ಆ ಮತದಲ್ಲಿ ಇರಲಾರದೆ ಕೊನೆಗೆ ಕ್ರೈಸ್ತಮತವೇ ದಿಕ್ಕೆಂದು ತಿಳಿದು ಸ್ವಲ್ಪಕಾಲಕ್ಕೆ ಕ್ರೈಸ್ತ ಮತದೊಳಗೆ ಬರುವುದು ನಡೆದಿದೆ.

ಕ್ರೈಸ್ತಮತದೊಳಗೆ ಬಾರದ ಮುನ್ನವೇ ನನಗೆ ಜ್ಞಾನ ಬೇಕೆಂದು ಕೇಳಿ, ತಪ್ಪದೆ ತಿಳಿಸುತ್ತೇವೆಂದು ಅವರು ಹೇಳಿದ ನಂತರವೇ ಇದರೊಳಗೆ ಬರುವುದು ನಡೆದಿದೆ. ನಾನು ಈಗ ಒಬ್ಬ ಬೋಧಕನಾಗಿ ಇದ್ದೇನೆ. ಸೃಷ್ಠಿಕರ್ತನಾದ ದೇವರನ್ನು ಕುರಿತು ನಾನು ಹೆಚ್ಚಾಗಿ ಬೋಧಿಸುತ್ತಿರುತ್ತೇನೆ. ಆದ್ದರಿಂದ ನನ್ನನ್ನು ಎಲ್ಲರೂ ಕ್ರಿಯೇಟರ್ ಪ್ರೇಮ್‌ಕುಮಾರ್ ಎನ್ನುತ್ತಿರುತ್ತಾರೆ. ನಾನು ಇತರರ ದೃಷ್ಠಿಯಲ್ಲಿ ಪಾಸ್ಟರಾಗಿ, ಬೋಧಕನಾಗಿದ್ದರೂ ಬೈಬಲ್‌ನಲ್ಲಿರುವುದು ಹೇಳುವುದು ಹೊರತುಪಡಿಸಿ ಪ್ರತ್ಯೇಕಿಸಿ ನನಗೇನು ತಿಳಿದಿದೆ! ಎಂಬ ಪ್ರಶ್ನೆ ನನ್ನಲ್ಲಿ ಹಿಂಬಾಲಿಸುತ್ತಲೇ ಇದೆ. ಒಂದುಕಡೆ **'ತಂದೆಯಾದ ದೇವರು'** ಎಂದು ಹೇಳಿದ

ನಂತರ ಮತ್ತೊಂದುಕಡೆ **'ಪರಿಶುದ್ಧಾತ್ಮಯೇ ದೇವರೆಂದು' ಹೇಳಬೇಕಾಗಿ ಬರುತ್ತಿದೆ. ಇಲ್ಲಿ 'ದೇವರು ತಂದೆಯಾದ ಇಲ್ಲವೆ ಪರಿಶುದ್ಧಾತ್ಮಾ'** ಎಂಬ ಪ್ರಶ್ನೆ ಉಳಿದುಹೋಗುತ್ತಿದೆ. ಈ ಪ್ರಶ್ನೆ ನನಗೇ ಅಲ್ಲ ಕ್ರೈಸ್ತ ಮತದಲ್ಲಿರುವ ದೊಡ್ಡ ಬೋಧಕರಿಗೂ ಸಹ ಇದೆ. ಅವರೆ ಯಾವಕಡೆ ತೀರ್ಮಾನಿಸಿಕೊಳ್ಳದೆ ಗೊಂದಲದಲ್ಲಿದ್ದಾರೆ. ಈ ವಿಧವಾಗಿ ಎಲ್ಲಿ ಹೋದರೂ ಅಸಂಪೂರ್ಣ ಜ್ಞಾನವೇ ಕಾಣಿಸುತ್ತಿದೆ. ಈಗ ಅಲ್ಲದಿದ್ದರೆ ಯಾವಾಗಲೋ ಒಂದುಸಲ ತಿಳಿಯುತ್ತದೆ ಎಂದು ಹಾಗೇ ಕಾಲ ಕಳೆಯುತ್ತಿದ್ದೇನೆ. ಆದರೆ ನಾನು ಈ ಮಧ್ಯಕಾಲದಲ್ಲಿ ಒಂದುಕಡೆ ಬೋಧನೆ ಹೇಳುತ್ತಿದ್ದರೆ ಕೆಲವರು ಹಿಂದೂಗಳು ನಾವು ಭಜರಂಗದಳ್ ಕಾರ್ಯಕರ್ತರೆಂದು ಹೇಳಿ ನಾನು ಕ್ರೈಸ್ತವ ಬೋಧನೆ ಹೇಳುತ್ತಿರುವುದಕ್ಕೆ ನನ್ನನ್ನು ಒಡೆದುಹೋಗಿದ್ದಾರೆ. ನಂತರ ಆ ಊರಿನೊಳಗೆ ಬಂದರೆ ಸಾಯಿಸುತ್ತೇವೆಂದು ಹೆದರಿಸಿದ್ದಾರೆ. ಕ್ರೈಸ್ತವವನ್ನು ಬೋಧಿಸುವುದರಿಂದ ಹಿಂದೂಗಳೆಲ್ಲರೂ ಕ್ರೈಸ್ತರಾಗಿ ಬದಲಾಗಿಹೋಗುತ್ತಿದ್ದಾರೆಂದು ಅವರು ಅವರ ಮತವನ್ನು ರಕ್ಷಿಸಿಕೊಳ್ಳುವುದಕ್ಕೆ ಬೋಧಕನಾದ ನನ್ನನ್ನು ಒಡೆದುಹೋಗಿದ್ದಾರೆ. ಅದಕ್ಕು ಮುಂಚೆಯೇ ಮತ್ತೊಂದುಕಡೆ ಮುಸ್ಲಿಮ್‌ರು ಅವರಮತದಿಂದ ಹೊರಗೆ ಬಂದಿದ್ದೇನೆಂಬ ಕೋಪವನ್ನು ಒಳಗಿಟ್ಟುಕೊಂಡು ನನ್ನ ಬೋಧನೆಯನ್ನು ಆತಂಕಪಡಿಸಿ ಜೀಹಾದ್ ಎಂದು ಹೆಸರು ಹೇಳಿ ಒಡೆದುಹೋಗಿದ್ದಾರೆ. ದೇವರ ವಿಷಯದಲ್ಲಿ ನಮಗೆ ವಿರುದ್ಧವಾಗಿರುವವರನ್ನು ಸಾಯಿಸಿಹಾಕುತ್ತೇವೆಂದು ಹೇಳಿಹೋಗಿದ್ದಾರೆ. ಇಂತಹ ದಾಳಿಗಳು ನಡೆಯುತ್ತಿವೆಂದು ನಮ್ಮ ಮತಹಿರಿಯರಿಗೆ ಹೇಳಿದರೆ ದೇವರ ಮಾರ್ಗ ಇಕ್ಕಟ್ಟಾಗಿಯೇ ಇರುತ್ತದೆ. ಸಹಿಸಿಕೊಳ್ಳಬೇಕೆಂದು ಹೇಳಿ ಸರಿಮಾಡುತ್ತಿದ್ದಾರೆ. ನಾನು ಹಿಂದೂವಾಗಿದ್ದು ಮುಸ್ಲಿಮ್ ಆಗುವುದೂ, ಮುಸ್ಲಿಮಾಗಿದ್ದೂ ಕ್ರೈಸ್ತನಾಗಿ ಬದಲಾವಣೆಯಾಗುವುದರಿಂದ ಮುಸ್ಲಿಮ್‌ರೇನೊ ಜೀಹಾದ್ ಎಂದು ಹೆಸರು ಹೇಳಿ ಹೊಡೆಯುತ್ತಿದ್ದಾರೆ. ಹಿಂದೂಗಳೇನೊ ಜೀಹಾದ್ ಎಂಬ ಹೆಸರು ಹೇಳದೆಯೇ ಹೊಡೆಯುತ್ತಿದ್ದಾರೆ. ಈಗ ನಾನು ಎರಡಕ್ಕು ಕೆಟ್ಟ ಲೇವಡಿಯಾಗಿದ್ದೇನೆ. ಒಂದುಕಡೆ ನನಗೆ ದೇವರ ವಿಷಯದಲ್ಲಿ ಎಷ್ಟೋ ಪ್ರಶ್ನೆಗಳು ಉಳಿದುಹೋಗಿ ಅವುಗಳಿಗೆ ಇಲ್ಲಿಯವರೆಗು ಉತ್ತರ ಸಿಗಲಿಲ್ಲ.

ಯಾವಾಗಲೋ ಒಂದುಬಾರಿ ತಿಳಿಯುತ್ತದೆ ಅಂದುಕೊಂಡು ಬದುಕುತ್ತಿದ್ದರೆ ಒಂದುಕಡೆ ಪವಿತ್ರಯುದ್ಧವೆಂದು ಮುಸ್ಲಿಮ್‍ರು, ಮತ್ತೊಂದುಕಡೆ ಮತರಕ್ಷಣೆಯೆಂದು ಹಿಂದೂಗಳು ನನ್ನನ್ನು ಬಾಧಿಸುವುದು ಪ್ರಾರಂಭಿಸಿದ್ದಾರೆ. ನಾನು ಏನು ಆಲೋಚಿಸಲಾರದ ಸ್ಥಿತಿಯಲ್ಲಿ ನಿಮ್ಮ ಹತ್ತಿರಕ್ಕೆ ಬಂದು ಇರುವುದು ಇದ್ದಂತೆ ಹೇಳಿದ್ದೇನೆ. ನಿಮ್ಮ ಬುದ್ಧಿಗೆ ತೋಚಿದ ಸಲಹೆ ಹೇಳುತ್ತೀರೆಂದು ಕೇಳುತ್ತಿದ್ದೇನೆ.

**ನಾನು :–** ನೀನು ಮತವನ್ನು ಬದಲಾಯಿಸಿದಕ್ಕೆ ಹಿಂದೂಗಳಿಂದಲೂ, ಮುಸ್ಲಿಮ್‍ರಿಂದಲೂ ತೊಂದರೆಪಡುತ್ತಿದ್ದೀಯಾ. ನಾವು ಮತವನ್ನು ಬದಲಾಯಿಸದಿದ್ದರೂ, ಹಿಂದೂಮತದಲ್ಲಿಯೇ ಗುರುವಾಗಿದ್ದೂ, ದೊಡ್ಡ ಜ್ಞಾನವನ್ನು ಹೇಳುತ್ತಿದ್ದರೂ, ನಮ್ಮನ್ನೂ ಸಹ ಬಿಡದೆ ಪರಮತವನ್ನು ಬೋಧಿಸುತ್ತಿದ್ದಾರೆಂದು ಆರೋಪಿಸುತ್ತಾ ಆತಂಕಪಡಿಸುತ್ತಿದ್ದಾರೆ. ಅದೆಲ್ಲವೂ ಮನುಷ್ಯರ ಅಜ್ಞಾನ, ಎಲ್ಲಿದ್ದರೂ ನಡೆಯಬೇಕಾಗಿರುವುದು ಇರುವಾಗ ನಡೆಯದೆ ನಿಲ್ಲುವುದಿಲ್ಲ. ಅದಕ್ಕೋಸ್ಕರ ನೀನು ಚಿಂತಿಸಬೇಕಾದ ಅವಶ್ಯಕತೆ ಇಲ್ಲ. ನಿನಗೆ ಸಮಾಧಾನದಿಂದ ಕೂಡಿಕೊಂಡ ಜ್ಞಾನ ದೊರಕಲಿಲ್ಲವೆಂದು ನೀನು ಚಿಂತಿಸಬೇಕು.

**ಪ್ರೇಮ್ :–** ಪ್ರಪಂಚದಲ್ಲಿ ಮನುಷ್ಯರು ಬಾಧಿಸುವ ಬಾಧೆಗಿಂತ ನನಗೆ ಸರಿಯಾದ ಜ್ಞಾನ ದೊರಕಲಿಲ್ಲವೆಂದೇ ಹೆಚ್ಚಾಗಿ ದುಃಖದಿಂದ ಇದೆ.

**ನಾನು :–** ಬೇಕೆಂದು ಶ್ರದ್ಧೆ ಇರುವವನಿಗೆ ದೇವರು ತಪ್ಪದೆ ಜ್ಞಾನವನ್ನು ಒದಗಿಸುತ್ತಾನೆ.

**ಪ್ರೇಮ್ :–** ಇಲ್ಲಿಯವರೆಗೂ ಸಿಗಲಿಲ್ಲವಲ್ಲ!

**ನಾನು :–** ಯಾವುದಕ್ಕಾದರೂ ಸಮಯ ಬರಬೇಕಲ್ಲವೆ! ಯಾವುದು ಯಾವಾಗ ಯಾರಿಗೆಕೊಡಬೇಕೆಂಬ ವಿಷಯ ದೇವರಿಗೆ ಚೆನ್ನಾಗಿ ತಿಳಿದಿದೆ. ಪ್ರತಿ ಪ್ರಶ್ನೆಗು ಉತ್ತರ ಕೊಡುವವನು ತಪ್ಪದೆ ದೊರಕುತ್ತಾನೆ.

(ನಾವು ಮಾತನಾಡುತ್ತಿರುವಾಗ ಅಲ್ಲಿಗೆ ಪ್ರೇಮ್‍ಕುಮಾರ್‌ಗೆ ತಿಳಿದ ಪರಿಚಯವಿರುವ ಮುಸ್ಲಿಮ್ ಸ್ನೇಹಿತನು ಬರುವುದು ನಡೆದಿದೆ. ಬಂದಿರುವ

ಮುಸ್ಲಿಮ್ ಪ್ರೇಮ್ ಕುಮಾರ್ ಸ್ನೇಹಿತನಾದ್ದರಿಂದ ಪ್ರೇಮ್‌ಕುಮಾರ್ ಆತನನ್ನು ನನಗೆ ಪರಿಚಯ ಮಾಡಿದನು. ಬಂದಿರುವ ಮುಸ್ಲಿಮ್ ಯುವಕನು ಸಹ ತನ್ನಂತೆಯೇ ಜ್ಞಾನಕ್ಕೋಸ್ಕರ ಅನ್ವೇಷಣೆ ಮಾಡುತ್ತಿದ್ದಾನೆಂದು ಹೇಳಿದನು. ಆಗ ಮುಸ್ಲಿಮ್ ಯುವಕನು ನನ್ನನ್ನು ಜ್ಞಾನಕ್ಕೆ ಸಂಬಂಧಿಸಿದ ಕೆಲವು ಪ್ರಶ್ನೆಗಳನ್ನು ಕೇಳುವುದು ನಡೆದಿದೆ. ಆ ವಿಷಯವನ್ನು ಇಲ್ಲಿ ನೊಂದಾಯಿಸುತ್ತಿದ್ದೇವೆ ನೋಡಿರಿ.)

**ಮುಸ್ಲಿಮ್ ಯುವಕನು :–** ಸ್ವಾಮೀಗಳೆ! ನೀವು ಬರೆದ ಗ್ರಂಥಗಳನ್ನು ನಾನು ಇತರರ ಹತ್ತಿರವಿರುವಾಗ ನೋಡಿ ಕೆಲವು ಗ್ರಂಥಗಳನ್ನು ಓದಿದ್ದೇನೆ. ಅದರಲ್ಲಿ ಕೆಲವು ಪ್ರಶ್ನೆಗಳಿಗೆ ನನಗೆ ವಿವರ ತಿಳಿಯಲಿಲ್ಲ. ನೀವು ಹೇಳಿರುವುದು ಸ್ವಲ್ಪಮಟ್ಟಿಗೆ ಅರ್ಥವಾಗಿದೆ. ಆದರೂ ಸ್ವಲ್ಪ ಅನುಮಾನವಿದೆ. ಈಗ ಅವುಗಳನ್ನು ಕೇಳಬಹುದೆಂದರೆ ಕೇಳುತ್ತೇನೆ.

**ನಾನು :–** ನಾನು ಬರೆದಿರುವುದಕ್ಕೆ ನನ್ನನ್ನು ಕೇಳದೆ ಹೋದರೆ ಯಾರನ್ನು ಕೇಳುತ್ತೀಯಾ. ಫರವಾಗಿಲ್ಲ ಧೈರ್ಯವಾಗಿ ಕೇಳು,

**ಮುಸ್ಲಿಮ್ :–** ಸ್ವಾಮಿ! ನೀವು "ಪ್ರಥಮ ದೈವಗ್ರಂಥ ಭಗವದ್ಗೀತೆ" ಎಂದು ಹೇಳಿದ್ದೀರಾ. ಇಲ್ಲಿಯವರೆಗು ಹಿಂದೂಗಳ ಗುರುಗಳು ಯಾರಾಗಲಿ ಭಗವದ್ಗೀತೆಯನ್ನು ಪ್ರಥಮ ದೈವಗ್ರಂಥವೆಂದು ಹೇಳಲಿಲ್ಲ. ಅಂತಹದ್ದು ಅವರೆಲ್ಲರನ್ನು ಅತಿಕ್ರಮಿಸಿ ನೀವು ಹೇಳಿದಕ್ಕೆ ಸಂತೋಷ. ಆದರೆ ನೀವು ಯಾವ ಆಧಾರದಿಂದ ಭಗವದ್ಗೀತೆಯನ್ನು ಪ್ರಥಮ ದೈವಗ್ರಂಥ ಎಂದಿದ್ದೀರಾ?

**ನಾನು :–** ಅದಕ್ಕೆ ಉತ್ತರ ಭಗವದ್ಗೀತೆಯಲ್ಲಿಯೇ ಇದೆ. ಭಗವದ್ಗೀತೆಯಲ್ಲಿ ಜ್ಞಾನಯೋಗ ಎಂಬ ಅಧ್ಯಾಯದಲ್ಲಿ ಮೊದಲ ಶ್ಲೋಕದಲ್ಲಿಯೇ ಕೃಷ್ಣನು ಅರ್ಜುನನೊಂದಿಗೆ ಹೇಳುತ್ತಾ ಸೃಷ್ಠಿ ಆದಿಯಲ್ಲಿ ನಾನು ಸೂರ್ಯನಿಗೆ ಹೇಳಿದ ಜ್ಞಾನವನ್ನೇ ಈಗ ನಾನು ನಿನಗೆ ಹೇಳುತ್ತಿದ್ದೇನೆಂದು ಹೇಳಿದ್ದಾನೆ. ಆಗ ಅರ್ಜುನನು ನೀನು ಹುಟ್ಟಿರುವುದು ಈಗ ಅಲ್ಲವೆ! ಸೂರ್ಯನು ಹುಟ್ಟಿರುವುದು ಸೃಷ್ಠಿ ಆದಿಯಲ್ಲಿ ಅಲ್ಲವೆ! ನೀನು ಸೂರ್ಯನಿಗೆ ಜ್ಞಾನ ಹೇಗೆ ಹೇಳಿದ್ದೀಯಾ ಎಂದು ಕೇಳಿದನು.

ಇದರಿಂದ ದ್ವಾಪರಯುಗದಲ್ಲಿ ಹೇಳಲಾದ ಭಗವದ್ಗೀತೆ ಸೃಷ್ಠಿ ಆದಿಯಲ್ಲಿಯೇ ಹೇಳಲಾಗಿದೆಯೆಂದು ತಿಳಿಯುತ್ತಿದೆ. ಆದ್ದರಿಂದ ಭಗವದ್ಗೀತೆ ಪ್ರಥಮ ದೈವಜ್ಞಾನವಿದೆಯೆಂದು ಅದನ್ನು ಪ್ರಥಮ ದೈವ ಗ್ರಂಥ ಎನ್ನುತ್ತಿದ್ದೇವೆ. ಖುರಾನ್ ಅಂತಿಮ ದೈವಗ್ರಂಥ ಎನ್ನುವುದಕ್ಕೆ ಖುರ್‌ಆನ್‌ನಲ್ಲಿಯೇ ಆಧಾರವಿರುವಂತೆ, ಭಗವದ್ಗೀತೆ ಪ್ರಥಮ ದೈವಗ್ರಂಥವೆನ್ನುವುದಕ್ಕೆ ಭಗವದ್ಗೀತೆಯಲ್ಲಿಯೇ ಆಧಾರ ಇದೆ.

**ಮುಸ್ಲಿಮ್ :–** ಖುರ್‌ಆನ್ ಗ್ರಂಥ ಭಗವದ್ಗೀತೆಯನ್ನು ಧೃವೀಕರಿಸುತ್ತಿದೆಂದು ಹೇಳಿದ್ದೀರ ಅಲ್ಲವೆ! ಧೃವೀಕರಿಸುವುದು ಎಂದರೆ ಏನು?

**ನಾನು :–** ದೃಢಪಡಿಸುವುದು ಎಂದರೂ, ಧೃವೀಕರಿಸುವುದು ಎಂದರೂ ಎರಡೂ ಒಂದೇ ಅರ್ಥವನ್ನು ಕೊಡುತ್ತಿವೆ. ಧೃವೀಕರಿಸುವುದು ಎಂದರೂ, ಸಾಕ್ಷ್ಯ ಹೇಳುವುದು ಎಂಬುವುದಕ್ಕೆ ಸಮಾನವಾಗುತ್ತದೆ. ಭಗವದ್ಗೀತೆ ಉಳಿದ ಗ್ರಂಥಗಳಿಗೆ ಆಧಾರವೆಂದು, ಕೊನೆಗೆ ಖುರ್‌ಆನ್ ಗ್ರಂಥಕ್ಕು ಸಹ ಆಧಾರವೆಂದು ಖುರ್‌ಆನ್ ಗ್ರಂಥದಲ್ಲಿಯೇ ಬಹಳಬಾರಿ ಹೇಳಿದ್ದಾರೆ. ಇದು ವಾಸ್ತವವೇ ಎಂದು ನಿರ್ಧಾರಿಸುವುದನ್ನು ಧೃವೀಕರಿಸಿದಂತಾಗುತ್ತಿದೆ. ಕುಲಧೃವ ಪತ್ರ ಎಂದು ಇದೆಯೆಂದುಕೊಳ್ಳಿ. ಆಗ ಈತನದು ಇಂತಹ ಕುಲವೆಂದು ನಿರ್ಧಾರಿಸುತ್ತಾ ಸಾಕ್ಷ್ಯವನ್ನು ಕೊಡುವ ಪತ್ರವನ್ನು ಕುಲಧೃವಪತ್ರ ಎನ್ನುತ್ತೇವೆ. ಹಾಗೆ ಭಗವದ್ಗೀತೆ ಎಲ್ಲದಕ್ಕು ಮೂಲ ಗ್ರಂಥವೆಂದು ಖುರ್‌ಆನ್ ಗ್ರಂಥ ಧೃವೀಕರಿಸುತ್ತಿದೆ.

**ಮುಸ್ಲಿಮ್ :–** ಮೊದಲು ಬಂದ ಗ್ರಂಥ ಖುರ್‌ಆನ್‌ಗೆ ಆಧಾರವೆಂದು ಖುರ್‌ಆನ್ ಗ್ರಂಥದಲ್ಲಿ ಇದೆಯಾಗಲಿ, ಇಂತಹ ಭಗವದ್ಗೀತೆಯೆಂದು ಹೆಸರು ಹೇಳಲಿಲ್ಲ ತಾನೆ! ಆಗ ಮೊದಲು ಬಂದಿರುವುದು ಯಾವ ಗ್ರಂಥವೆಂದು ಅರ್ಥ ಮಾಡಿಕೊಳ್ಳಬೇಕು?

**ನಾನು :–** ಭಗವದ್ಗೀತೆಯಲ್ಲಿ ಜ್ಞಾನಯೋಗದಲ್ಲಿ ಮೊದಲ ಶ್ಲೋಕವೊಂದರ ಆಧಾರದಿಂದಲೇ ಭಗವದ್ಗೀತೆ ಎಲ್ಲದಕ್ಕಿಂತ ಮೊದಲು ಬಂದಿರುವ ಗ್ರಂಥವೆಂದು

ತಿಳಿಯಬಹುದು. ಅಷ್ಟೇಅಲ್ಲದೆ ಭಗವದ್ಗೀತೆ ಹುಟ್ಟಿದ ಐದುಸಾವಿರ ವರ್ಷಗಳ ಕೆಳಗೆ ಯಾವ ಮತವಾಗಲಿ, ಯಾವ ಮತಗ್ರಂಥವಾಗಲಿ ಇಲ್ಲ, ಅಂತಹದರಲ್ಲಿ ಗೀತೆ ವಯಸ್ಸನ್ನನುಸರಿಸಿಯಾದರೂ ಅದು ಮೊದಲ ಗ್ರಂಥವೆಂದು ಹೇಳಬಹುದು.

**ಮುಸ್ಲಿಮ್ :–** ಖುರ್‌ಆನ್ ಗ್ರಂಥದಲ್ಲಿ ಒಂದುಕಡೆ ಇಂಜೀಲು ಗ್ರಂಥ, ಖುರ್‌ಆನ್ ಗ್ರಂಥ ಅವುಗಳಿಗಿಂತ ಮೊದಲಿರುವ ತೌರಾತ್ ಗ್ರಂಥವನ್ನು ಧೃವೀಕರಿಸುತ್ತಿದೆ ಯೆಂದು ಹೇಳಲಾಗಿದೆ. ಆಗ ಒಂದು ಖುರ್‌ಆನ್ ಗ್ರಂಥವೇ ಅಲ್ಲದೆ ಇಂಜೀಲು (ಬೈಬಲ್) ಗ್ರಂಥ ಸಹ ತೌರಾತ್ ಗ್ರಂಥ ದೈವಗ್ರಂಥವೆಂದು ಅದೇ ಎಲ್ಲದಕ್ಕಿಂತ ಆಧಾರವೆಂದು ಹೇಳುವುದು ನಡೆದಿದೆ. ಬೈಬಲ್ ಸಹ ತೌರಾತನ್ನು ಧೃವೀಕರಿಸುತ್ತದೆ. ಅಂತಹದರಲ್ಲಿ ತೌರಾತ್ ಗ್ರಂಥ ಒಂದಿದೆಯೆಂದು ತಿಳಿಯುತ್ತದೆ. ಆ ತೌರಾತ್ ಗ್ರಂಥವೇ ಭಗವದ್ಗೀತೆಯೆಂದು ಎಲ್ಲಿಯಾದರೂ ಹೇಳಲ್ಪಟ್ಟಿದೆಯಾ? ತೌರಾತ್ ಎಂಬುದು ಭಗವದ್ಗೀತೆಯೆಂದು ನೀವು ಮಾತ್ರವೇ ಹೇಳಿದ್ದೀರಾ. ಅದಕ್ಕೂ ಮೊದಲು ಯಾರೂ ಹೇಳಲಿಲ್ಲ ಅಲ್ಲವೆ!

**ನಾನು :–** ಹೌದು! ತೌರಾತ್ ಗ್ರಂಥ ಭಗವದ್ಗೀತೆಯೆಂದು ಯಾರೂ ಹೇಳಲಿಲ್ಲ. ಯಾರೂ ಹೇಳಲಿಲ್ಲವಾದ್ದರಿಂದ ನಾನು ಹೇಳಿದ್ದೇನೆ. ಬೈಬಲ್‌ಗಿಂತ ಮೊದಲಿರುವ ಗ್ರಂಥ ಭಗವದ್ಗೀತೆ. ಆದ್ದರಿಂದ ತೌರಾತ್ ಗ್ರಂಥವೇ ಭಗವದ್ಗೀತೆಯೆಂದು ಹೇಳಿದ್ದೇವೆ.

**ಮುಸ್ಲಿಮ್ :–** ನೀವು ಹೇಳಿದಷ್ಟುಮಾತ್ರಕ್ಕೆ ನಾವು ನಂಬಬೇಕಾ? ಎನ್ನುವವರು ಸಹ ಕೆಲವರಿರಬಹುದು ಅಲ್ಲವೆ! ಅವರಿಗೆ ನೀವು ಏನೆಂದು ಸಮಾಧಾನ ಹೇಳುತ್ತೀರಾ?

**ನಾನು :–** ಅವರನ್ನು ನಾನು ನಂಬಿರೆಂದು ಹೇಳಲಿಲ್ಲ ತಾನೆ! ನನ್ನ ಮಾತಿಗೋಸ್ಕರ ಎದುರು ನೋಡುವವರಿಗೆ ಮಾತ್ರವೆ ನಾನು ಹೇಳಿದ್ದೇನೆ, ಎಲ್ಲರಿಗೂ ಅಲ್ಲ.

**ಮುಸ್ಲಿಮ್ :–** ಕೆಲವರಿಗಾದರೂ ನೀವು ಯಾವ ಆಧಾರದಿಂದ ಹೇಳಿದ್ದೀರಾ?

**ನಾನು :–** ನಾನು ಹೇಳಿರುವುದಕ್ಕೆ ಆಧಾರ ಇರುವುದಿಲ್ಲ. ನಾನು ಹೇಳಿದ ನಂತರ ನನ್ನಮಾತು ಇತರರಿಗೆ ಆಧಾರವಾಗುತ್ತದೆ. ನಾನು ಒಂದುಮಾತನ್ನು ಕೇಳುತ್ತೇನೆ ನಾನು ಹೇಳಿದಮಾತನ್ನು ಅಲ್ಲವೆನ್ನುವುದಕ್ಕೆ ಯಾರ ಹತ್ತಿರವಾದರೂ ಆಧಾರವಿದೆಯಾ? ಎಂದು ಕೇಳುತ್ತಿದ್ದೇನೆ. ನನ್ನ ಮಾತನ್ನು ಅಲ್ಲವೆನ್ನುವುದಕ್ಕೆ ಯಾರತ್ತಿರವೂ ಯಾವ ಆಧಾರವೂ ಇರುವುದಿಲ್ಲ. ಅಷ್ಟೇ ಏಕೆ! ತೌರಾತ್ ಗ್ರಂಥ ಯಾವುದಾಗಿರುವುದು ನಿಮಗೆ ತಿಳಿಯದು ಅಲ್ಲವೆ! ಅಂತಹದರಲ್ಲಿ ನಾನು ಹೇಳಿದ ಮಾತನ್ನು ಕೇಳುವುದಕ್ಕೆ ನಿಮಗೇನು ಬಾಧೆಯೆಂದು ಕೇಳುತ್ತಿದ್ದೇನೆ. ನಿಮಗೆ ಸರಿಹೋಗದಿದ್ದರೆ ನನ್ನ ಮಾತನ್ನು ವಿಶ್ವಾಸಿಸಬೇಡವೆಂದು ತಿಳಿಸುತ್ತಿದ್ದೇನೆ.

**ಮುಸ್ಲಿಮ್ :–** ಈ ಕಾಲದಲ್ಲಿ ಪ್ರತಿಯೊಂದಕ್ಕು ಆಧಾರಬೇಕೆಂದು ಕೇಳುವವರಿದ್ದಾರೆ. ಅವರಿಗೆ ಆಧಾರವನ್ನು ತೋರಿಸಿದವರಾದರೂ ನಂಬುವುದಿಲ್ಲ.

**ನಾನು :–** ಆಧಾರವಿರುವ ಪ್ರತಿಯೊಂದು ಸತ್ಯವಲ್ಲ. ಆಧಾರವಿಲ್ಲದ ಪ್ರತಿಯೊಂದು ಅಸತ್ಯವಲ್ಲ. ಖುರ್‌ಆನ್ ಗ್ರಂಥವಿದೆ ಅಲ್ಲವೆ! ಅದರಲ್ಲಿನ ಮಾತುಗಳನ್ನು ನಾವು ಏಕೆ ನಂಬಬೇಕು? ಅದರಲ್ಲಿ ಹೇಳಿದ ಮಾತುಗಳೆಲ್ಲ ನಿಜವೆನ್ನುವುದಕ್ಕೆ ಏನಾದರೂ ಆಧಾರವಿದೆಯಾ? ಎಂದು ಯಾವ ಮುಸ್ಲಿಮ್ ಪ್ರಶ್ನಿಸಲಿಲ್ಲ ಅಲ್ಲವೆ! ಪ್ರತಿಯೊಂದಕ್ಕೂ ಆಧಾರ ಬೇಕೆಂದು ಕೇಳುವವರು ಖುರ್‌ಆನ್ ವಿಷಯದಲ್ಲಿ ಮುಸ್ಲಿಮ್‌ರು ಆಧಾರವನ್ನು ಏಕೆ ಕೇಳಲಿಲ್ಲ? ಹಾಗೆ ಭಗವದ್ಗೀತೆ ವಿಷಯದಲ್ಲಿ ಹಿಂದೂಗಳು ಆಧಾರವನ್ನು ಏಕೆ ಕೇಳಲಿಲ್ಲ? ಅಲ್ಲಿ ಆಧಾರಗಳು ಕೇಳದವರು ತೌರಾತ್ ಗ್ರಂಥ ವಿಷಯದಲ್ಲಿ ಏಕೆ ಆಧಾರವನ್ನು ಕೇಳುತ್ತಿದ್ದಾರೆ? ನಾನು ಒಂದು ಪ್ರಶ್ನೆಯನ್ನು ಕೇಳುತ್ತೇನೆ, ಆ ಪ್ರಶ್ನೆಯನ್ನು ತೆಗೆದುಕೊಂಡು ಪ್ರತಿಯೊಂದಕ್ಕು ಆಧಾರಬೇಕೆಂದು ಕೇಳುವವರ ಬಳಿಗೆ ಹೋಗಿ ಪ್ರಶ್ನಿಸಿ ನೋಡು ಏನು ಹೇಳುತ್ತಾರೋ ತಿಳಿಯುತ್ತದೆ. **ಪವಿತ್ರ ಖುರ್‌ಆನ್ ಗ್ರಂಥದಲ್ಲಿ 43ನೇ ಸೂರಾ, 4ನೇ ಆಯತ್‌ನಲ್ಲಿ** ಹೀಗೆ ಇದೆ. **"ನಿಶ್ಚಯವಾಗಿ ಇದು (ಖುರ್‌ಆನ್ ಗ್ರಂಥ) ಮಾತೃ ಗ್ರಂಥದಲ್ಲಿದೆ. ಇದು ನಮ್ಮ ಹತ್ತಿರ ಎಷ್ಟೋ ಪವಿತ್ರವಾದುದು, ವಿವೇಕದಿಂದ ತುಂಬಿರುವ ಗ್ರಂಥವಾಗಿ ಇದೆ"** ಈ ವಾಕ್ಯ ಖುರ್‌ಆನ್ ಗ್ರಂಥವನ್ನು ಉದ್ದೇಶಿಸಿ

ಹೇಳಿರುವುದು. ಖುರ್‌ಆನ್ ಗ್ರಂಥಕ್ಕೆ ಮಾತೃ ಗ್ರಂಥ ಯಾವುದೋ ಯಾರಾದರೂ ಸರಿಯಾದ ಸಮಾಧಾನ ಹೇಳುತ್ತೀರಾ? ಇಲ್ಲಿಯವರೆಗೂ ಮುಸ್ಲಿಮರೆಲ್ಲರೂ ಮಾತೃಗ್ರಂಥವಾಗಿ (ಉಮ್ಮುಲ್ ಕಿತಾಬಾಗಿ) ಹೇಳಿಕೊಳ್ಳುತ್ತಿರುವ ಗ್ರಂಥ ಸತ್ಯವೇನಾ? **85ನೇ ಸೂರಾ 22ನೇ ಆಯತ್‌ನಲ್ಲಿ** ಹೇಳಿದ ಉಮ್ಮುಲ್ ಕಿತಾಬ್ ಇಲ್ಲವೆ ಮಾತೃಗ್ರಂಥ ಸುರಕ್ಷಿತವಾದ ಫಲಕದ ಮೇಲೆ ಬರೆಯಲ್ಪಟ್ಟ **"ಲೌಹೆಮಹ್‌ಪೂಜ್"** ಎಂಬ ಗ್ರಂಥವೇನಾ? ಎಂದರೆ ಮೊದಲು ಬರೆಯಲ್ಪಟ್ಟಂತೆ ಯಥಾರ್ಥ ಸ್ಥಿತಿಯಲ್ಲಿರುವ ಮೂಲಗ್ರಂಥವಾ? ಇದು ನನ್ನ ಪ್ರಶ್ನೆ ಮಾತ್ರವೆ. ಒಂದುವೇಳೆ ನೀವು ಹೇಳಿರುವುದೆ ಸತ್ಯವಾದ ಮಾತೃಗ್ರಂಥ ಎನ್ನುವುದಕ್ಕೆ ಆಧಾರ ಏನಾದರೂ ಇದೆಯಾ? ಮಾತೃ ಗ್ರಂಥವೆಂದರೆ ಅದೇನಾ? ಇನ್ನೂ ಏನಾದರೂ ಅದೇ ಎನ್ನುವುದಕ್ಕೆ ಪೂರ್ತಿ ಸಾಕ್ಷ್ಯವಿದೆಯಾ?

**ಮುಸ್ಲಿಮ್ :–** ನೀವು ಜೀಹಾದ್ ಅಥವಾ ಪವಿತ್ರಯುದ್ಧವನ್ನು ಕುರಿತು ಹೇಳುತ್ತಾ ಆ ಹೆಸರಾಗಲಿ, ಆ ಮಾತಾಗಲಿ ಖುರ್‌ಆನ್ ಗ್ರಂಥದಲ್ಲಿ ಇಲ್ಲವೆಂದಿದ್ದಾರೆ ಅಲ್ಲವೆ! ಆದರೆ **2ನೇ ಸೂರಾ, 216ನೇ ಆಯತ್‌ನಲ್ಲಿ "ನಿಮಗೆ ಇಷ್ಟವಿಲ್ಲದಾದರೂ ಅಸಹ್ಯಕರವಾದರೂ ಯುದ್ಧ ಮಾಡುವುದು ನಿಮಗೆ ವಿಧಿಯಾಗಿ ನಿರ್ಣಯಿಸಲ್ಪಟ್ಟಿದೆ. ನಿಮಗೆ ಇಷ್ಟವಾಗದ ವಿಷಯವೇ ನಿಮಗೆ ಮೇಲಾಗಿರುವುದು ಆಗಬಹುದು ಮತ್ತು ನಿಮಗೆ ಇಷ್ಟವಾದ ವಿಷಯವೇ ನಿಮಗೆ ಹಾನಿಕರವಾದುದು ಆಗಬಹುದು. ಆದರೆ ಅಲ್ಲಾಗೆ ಎಲ್ಲಾ ಗೊತ್ತು. ನಿಮಗೆ ಏನು ತಿಳಿಯದು"** ಎಂದು ಇದೆ. ಇದನ್ನು ಕುರಿತು ನೀವು ಏನನ್ನುತ್ತೀರಾ?

**ನಾನು :–** ಇಲ್ಲಿ ಹೇಳಿರುವುದು ಮನುಷ್ಯರನ್ನು ಸಾಯಿಸಿಕೊಳ್ಳುವ ಯುದ್ಧವಲ್ಲ. ದೈವಮಾರ್ಗದಲ್ಲಿ ಶ್ರಮಪಡುವುದನ್ನು ಮನುಷ್ಯನ ಜೀವನದಲ್ಲಿ ಯುದ್ಧವಾಗಿ ಇದೆಯೆಂದು ವರ್ಣಿಸಿ ಹೇಳಿದ್ದಾರೆ. ದೈವಮಾರ್ಗದಲ್ಲಿ ಹೋರಾಟದಂತೆ ಜೀವನವನ್ನು ಸಾಗಿಸುವುದನ್ನು ಧರ್ಮಯುದ್ಧ ಎನ್ನುತ್ತೇವೆ. ಧರ್ಮದಿಂದ ಅಧರ್ಮಗಳನ್ನು ನಾಶ ಮಾಡುವುದನ್ನು ಧರ್ಮಯುದ್ಧ ಎನ್ನಬಹುದು. ಧರ್ಮಯುದ್ಧದಲ್ಲಿ ನಷ್ಟ ಬರಬಹುದು, ಬಂಧುಗಳು ದೂರವಾಗಬಹುದು,

ಇರುವ ಸಂಪತ್ತು ಹೋಗಬಹುದು, ಆಸ್ತಿಗಳು ಹೋಗಬಹುದು, ಹೆಂಡತಿ ಮಕ್ಕಳು ಹೋಗಬಹುದು. ಆದ್ದರಿಂದ ಧರ್ಮಯುದ್ಧ ಎಲ್ಲರಿಗೂ ಇಷ್ಟವಾಗದಕೆಲಸವಾಗಿದೆ. ಆದರೂ ಇರುವವೆಲ್ಲ ಹೋದರೂ ಎಲ್ಲದಕ್ಕಿಂತ ಮೀರಿರುವುದು ನಮಗೆ ಲಭಿಸಬಹುದು. ಮೇಲಿನ ವಾಕ್ಯದಲ್ಲಿ ಸಹ ನಿಮಗೆ ಇಷ್ಟವಾಗದ ವಿಷಯವೇ ನಿಮಗೆ ಮೇಲಾಗಿರುವುದು ಆಗಬಹುದು ಎಂದು ಹೇಳಿದ್ದಾರೆ. **9ನೇ ಸೂರಾ 24ನೇ ಆಯತ್‌ನಲ್ಲಿ** ಹೀಗೆ ಇದೆ. **"ನಿಮ್ಮ ತಂದೆ ತಾತರು, ನಿಮ್ಮ ಕುಮಾರರು, ನಿಮ್ಮ ಸೋದರರು, ನಿಮ್ಮ ಸ್ನೇಹಿತರು, ನಿಮ್ಮ ಬಂಧುಗಳು, ನೀವು ಸಂಪಾದಿಸಿದ ಆಸ್ತಿಪಾಸ್ತಿಗಳು, ನಿಮ್ಮ ವ್ಯಾಪಾರಗಳು, ನಿಮ್ಮ ಪ್ರೀತಿಕರವಾದ ಭವನಗಳು ಅಲ್ಲಾಹ್‌ಗಿಂತ, ಅಲ್ಲಾ ಮಾರ್ಗದಲ್ಲಿ ಹೋರಾಟಕ್ಕಿಂತ ನಿಮಗೆ ಹೆಚ್ಚು ಪ್ರಿಯವಾದವಾದರೆ ಅಲ್ಲಾಹ್ ನಿಮಗೆ ಸನ್ಮಾರ್ಗವನ್ನು ತೋರಿಸುವುದಿಲ್ಲ."** ಎಂದು ಇವೆ ಅಲ್ಲವೆ! ಇಲ್ಲಿ ದೇವರ ವಿಷಯದಲ್ಲಿ ಪರೆದಾಡುವುದನ್ನು ಹೋರಾಟ ಎಂದು ಹೇಳುತ್ತಿದ್ದಾರೆ. ದೇವರ ಮಾರ್ಗದಲ್ಲಿ ಹೋರಾಟ ಎಂದರೆ ದೇವರಿಗೋಸ್ಕರ ಮಾಡುವ ಕೆಲಸಗಳೆಲ್ಲವೂ ಹೋರಾಟವೆಂದೇ ಹೇಳಬಹುದು. ಅದೇ ವಿಧವಾಗಿ ದೇವರ ಮಾರ್ಗದಲ್ಲಿನ ನಮಾಜ್, ಜಕಾತ್ ಮಾಡುವುದರಲ್ಲಿ ಅಯಿಷ್ಟತೆ ಏರ್ಪಡುತ್ತದೆ. ಆಗ ಮನುಷ್ಯನ ತಲೆಯಲ್ಲಿನ ಗುಣಗಳೊಂದಿಗೆ ಘರ್ಷಣೆ ಬೀಳಬೇಕಾಗಿಬರುತ್ತದೆ. ಅದನ್ನೇ ಇಲ್ಲಿ ಯುದ್ಧವೆಂದಿದ್ದಾರೆ.

**ಮುಸ್ಲಿಮ್ :-** ಯುದ್ಧ ಎಂದರೆ ಆಯುಧಗಳಿಂದ ಮಾಡುವುದೆಂದು, ಪವಿತ್ರ ಯುದ್ಧ ಎಂದರೆ ದೇವರಿಗೋಸ್ಕರ ಮಾಡುವುದೆಂದು, ಅವಿಶ್ವಾಸಿಗಳನ್ನು ಸಾಯಿಸುವುದು ಎಂದು ನಮ್ಮ ಹಿರಿಯರು ಹೇಳಿದಾಗ ಕೇಳಿದ್ದೇನೆ. ನೀವೇನೊ ಬೇರೆ ವಿಧವಾಗಿ ಹೇಳುತ್ತಿದ್ದೀರಾ.

**ನಾನು :-** ನಿನಗೆ ಚೆನ್ನಾಗಿ ಅರ್ಥ ಆಗಬೇಕೆಂದರೆ ಇನ್ನೂ ವಿವರವಾಗಿ ಹೇಳುತ್ತೇನೆ ನೋಡು. ಕತ್ತಿಗಳಿಂದ ಇಲ್ಲವೆ ಬಾಂಬುಗಳಿಂದ ಮನುಷ್ಯರನ್ನು ಸಾಯಿಸುವುದನ್ನು ಅಪವಿತ್ರ ಯುದ್ಧ ಎಂದು ಅನ್ನಬಹುದು. ಹಾಗೆ ಸಾಯಿಸುವುದು ತನ್ನ ಒಳಿತು

ಗೋಸ್ಕರವೇಯಾಗಲಿ ದೇವರ ಮೇಲುಗೋಸ್ಕರ ಅಲ್ಲ. ಹೊರಗಿನ ಕ್ರಿಯೆಗಳಿಂದ, ಹೊರಗಿನ ಯುದ್ಧಗಳಿಂದ ದೇವರು ತಿಳಿಯುವುದಿಲ್ಲ, ದೇವರು ತಿಳಿಯಬೇಕೆಂದರೆ ದೇವರಿಗೋಸ್ಕರ ಶರೀರದೊಳಗಿರುವ ಗುಣಗಳಿಂದ ಎಷ್ಟೋ ಪ್ರತಿಘಟನೆ ಮಾಡಬೇಕಾಗಿದೆ. ಶರೀರದಲ್ಲಿನ ಗುಣಗಳೆ ಮನುಷ್ಯನನ್ನು ವಕ್ರಮಾರ್ಗವನ್ನು ಹಿಡಿಸಿ ದೇವರಿಗೆ ದೂರ ಮಾಡುತ್ತಿವೆ. ಶರೀರದಲ್ಲಿನ ತಲೆಯಲ್ಲಿರುವ ಗುಣಗಳೆ ಸೈತಾನ್ ರೂಪದಲ್ಲಿವೆ. ಸೈತಾನ್ ಎಂದರೆ ಆಧ್ಯಾತ್ಮಿಕರಂಗದಲ್ಲಿ ಮಾಯೆ ಎನ್ನುತ್ತಿದ್ದೇವೆ. ಮಾಯೆಯಲ್ಲಿನ ಭಾಗಗಳೆ ಮನುಷ್ಯನಲ್ಲಿನ ಆರು ಗುಣಗಳು. ಇವುಗಳನ್ನೇ ಮನುಷ್ಯನಿಗೆ ಶತ್ರುವರ್ಗವೆಂದು ಹೇಳಬಹುದು. ಶತ್ರುವರ್ಗ ಎಂದರೆ ಶತ್ರುಗಳ ಗುಂಪು ಎಂದು ಅರ್ಥ. ಈ ಆರು ಗುಣಗಳು ಮನುಷ್ಯನಿಗೆ ಭೀಕರವಾದ ಶತ್ರುಗಳಾಗಿವೆ. ಮನುಷ್ಯ ಹೊರಗಿನ ಶತ್ರುಗಳೊಂದಿಗೆ ಹೋರಾಡಿದರೆ ಹೊರಗಿನ ಯುದ್ಧ ಆಗುತ್ತದೆ. ಒಳಗಿನ ಶತ್ರುಗಳಾದ ಆರರೊಂದಿಗೆ ಹೋರಾಡಿದರೆ ಒಳಗಿನ ಯುದ್ದ ಆಗುತ್ತದೆ.

| ಹೊರಗಿನ ಯುದ್ಧ | ಒಳಗಿನ ಯುದ್ಧ |
|---|---|
| 1) ಹೊರಗಿನ ಯುದ್ಧ ರಕ್ತಪಾತ ದಿಂದ ಕೂಡಿಕೊಂಡಿರುತ್ತದೆ. | 1) ಒಳಗಿನಯುದ್ಧ ರಕ್ತಪಾತ ರಹಿತವಾಗಿ ಇರುತ್ತದೆ. |
| 2) ಹೊರಗೆ ಒಬ್ಬ ಶತ್ರುವನ್ನು ಸಾಯಿಸಿದರೂ ಸತ್ತವನನ್ನು ಕುರಿತು ಅಳುವವರಿರುತ್ತಾರೆ. | 2) ಒಳಗೆ ಆರುಜನರನ್ನು ಸಾಯಿಸಿದರೂ ಅಳುವವರು ಯಾರೂ ಇಲ್ಲ. |
| 3) ಹೊರಗಿನ ಶತ್ರುಗಳನ್ನು ಸಾಯಿಸಿದರೆ ದೇವರು ತಿಳಿಯಲ್ಪಡದೆ ಹೋಗುವುದಲ್ಲದೆ ದೊಡ್ಡಮೊತ್ತದಲ್ಲಿ ಪಾಪ ಮಾತ್ರ ಬರುತ್ತದೆ. ಹೊರಗೆ ಶತ್ರುವನ್ನು ಸಾಯಿಸಿದರೆ ಪೊಲೀಸ್ | 3) ಒಳಗಿನ ಶತ್ರುವನ್ನು ಒಬ್ಬರನ್ನು ಸಾಯಿಸಿದರೂ, ಆರುಜನರನ್ನು ಸಾಯಿಸಿದರೂ ಕೇಸುಗಳು ಇರುವುದಿಲ್ಲ, ಶಿಕ್ಷೆಗಳೂ ಇರುವುದಿಲ್ಲ ಶಿಕ್ಷೆಗಳೂ ಇರುವುದಿಲ್ಲ |

| | |
|---|---|
| ಕೇಸುಗಳಿರುತ್ತವೆ, ಕೇಸುಗಳಿರುತ್ತವೆ, ನ್ಯಾಯ ಸ್ಥಾನದಲ್ಲಿ ಶಿಕ್ಷೆ ಇರುತ್ತದೆ. | ಶಿಕ್ಷೆಗಳೂ ಇರುವುದಿಲ್ಲ ಯಾಮಾತ್ರವು ಪಾಪ ಬರುವುದಿಲ್ಲ. |
| 4) ಹೊರಗಿನ ಶತ್ರುಗಳನ್ನು ಸಾಯಿಸುವುದರಿಂದ ದೇವರು ದೂರವಾಗುತ್ತಾನೆ. | 4) ಒಳಗಿನ ಗುಣ ಶತ್ರುಗಳನ್ನು ಸಾಯಿಸುವುದರಿಂದ ದೇವರಿಗೆ ಹತ್ತಿರವಾಗುವುದಕ್ಕೆ ಅವಕಾಶವಿದೆ. |
| 5) ಹೊರಗಿನ ಶತ್ರುಗಳನ್ನು ಸಾಯಿಸುವುದರಿಂದ ನರಕಪ್ರಾಪ್ತಿ ತಪ್ಪುವುದಿಲ್ಲ. | 5) ಒಳಗಿನ ಶತ್ರುಗಳನ್ನು ಸಾಯಿಸುವುದರಿಂದ ಮೋಕ್ಷ ಲಭಿಸುತ್ತದೆ. |
| 6) ಹೊರಗಿನ ಶತ್ರುಗಳನ್ನು ಸಾಯಿಸುವುದರಿಂದ ಹೊರಗಿನ ಆಸ್ತಿಗಳು ಬರಬಹುದು. | 6) ಒಳಗಿನ ಗುಣ ಶತ್ರುಗಳನ್ನು ಸಾಯಿಸುವುದರಿಂದ ಹೊರಗಿನ ಆಸ್ತಿಗಳು ಹೋಗಬಹುದು. |
| 7) ಹೊರಗಿನ ಯುದ್ಧದಿಂದ ಹೊರಗಿನ ರಕ್ತಪಾತದಿಂದ ಇತರರ ಆಸ್ತಿಯನ್ನು ದಕ್ಕಿಸಿಕೊಳ್ಳಬಹುದು. | 7) ಒಳಗಿನ ಯುದ್ಧದಿಂದ ಹೊರಗಿನ ಆಸ್ತಿಗಳು ಇರುವವು ಸಹ ಹೋಗ ಬಹುದು. ಹತ್ತಿರದ ಸಂಬಂಧಿಕರು ದೂರವಾಗಬಹುದು. |
| 8) ಹೊರಗೆ ಯಾವ ಶತ್ರುವನ್ನು ಸಾಯಿಸಿದರೂ ಆದು ಬಾಹ್ಯ ಯುದ್ಧದ ಕೆಳಗೆ ಬರುತ್ತದೆ. | 8) ಒಳಗೆ ಯಾವ ಗುಣವನ್ನು ಇಲ್ಲದಹಾಗೆ ಮಾಡಿಕೊಂಡರೂ ಅದು ಅಂತರಯುದ್ಧವಾಗುತ್ತದೆ. ಅಂತರ ಯುದ್ಧದಲ್ಲಿ ಮನುಷ್ಯ ಗುಣಗಳನ್ನು ಶತ್ರುಗಳನ್ನು ಜಯಿಸಿದರೆ ಹೊರಗೆ ಯಾವ ಲಾಭವು ಬರುವುದಿಲ್ಲ. |

| | |
|---|---|
| 9) ಹೊರಗೆ ನಡೆಯುವ ಯುದ್ಧವು ಆಯುಧಗಳಿಂದ ಮಾಡಿರುವುದಾಗಿ ಇದೆ. ಆಯುಧಗಳಿಂದ ಮಾಡುವ ವಿಚ್ಛಿನ್ನದಲ್ಲಿ (ಯುದ್ಧದಲ್ಲಿ) ಆಯುಷ್ಷು ಮರಣಗಳು ನಡೆಯುತ್ತವೆ. | 9) ಒಳಗಿನ ಯುದ್ಧದಿಂದ ಜನನ ಮರಣಗಳು ಇಲ್ಲದ ಮೋಕ್ಷ ಲಭಿಸುತ್ತದೆ. |
| 10) ಹೊರಗೆ ನಡೆಯುವ ಯುದ್ಧಕ್ಕೆ ಅಜ್ಞಾನಿಗಳ ಆಶೀರ್ವಾದಗಳು, ಅಜ್ಞಾನಿಗಳ ಸಲಹೆಗಳು, ಅಜ್ಞಾನಿಗಳ ಪ್ರೇರಣೆ ಇರುತ್ತದೆ. | 10) ಒಳಗೆ ನಡೆಯುವ ಯುದ್ಧಕ್ಕೆ ಜ್ಞಾನಿಗಳೊಂದರ ಸಲಹೆಗಳು, ಜ್ಞಾನಿಗಳೊಂದರ ಆಶೀರ್ವಾದಗಳು, ಜ್ಞಾನಿಗಳೊಂದರ ಪ್ರೇರಣೆ ಇರುತ್ತದೆ. |
| 11) ಹೊರಗಿನ ಯುದ್ಧವನ್ನು ಅಜ್ಞಾನಿಗಳು ಸಹಿತವು ಮಾಡುತ್ತಾರೆ. | 11) ಒಳಗಿನ ಯುದ್ಧವನ್ನು ಜ್ಞಾನಿಗಳು ಮಾತ್ರವೆ ಮಾಡುತ್ತಾರೆ. |
| 12) ಹೊರಗಿನ ಯುದ್ಧಕ್ಕೆ ಕಂಡಬಲವೂ, ಶರೀರ ಬಲವೂ ಅಗತ್ಯ. | 12) ಒಳಗಿನ ಯುದ್ಧಕ್ಕೆ ಕಂಡಬಲ, ಶರೀರ ಬಲ ಅಗತ್ಯವಿಲ್ಲ. ಜ್ಞಾನಬಲದಿಂದ ಮಾಡಬಹುದು. |
| 13) ಹೊರಗಿನ ಯುದ್ಧ ಮಾಡುವು ದಕ್ಕೆ ತರಭೇತಿ (ಟ್ರಯಿನಿಂಗ್) ಅಗತ್ಯ. | 13) ಒಳಗಿನ ಯುದ್ದಕ್ಕೆ ಟ್ರಯಿನಿಂಗ್ ತರಭೇತಿ ಅಗತ್ಯವಿಲ್ಲ. |
| 14) ಹೊರಗಿನ ಯುದ್ಧಕ್ಕೆ ಶರೀರ ಕವಚಗಳು, ಮಂದವಾದ ಬಟ್ಟೆಗಳು ಅಗತ್ಯ. | 14) ಒಳಗಿನ ಯುದ್ಧಕ್ಕೆ ಕವಚಗಳು, ಮಂದವಾದ ಬಟ್ಟೆಗಳು ಅಗತ್ಯವಿಲ್ಲ. ಸಣ್ಣ ಪುಟ್ಟಗೋಸಿ ಇಟ್ಟು ಕೊಂಡಾದರೂ ಯುದ್ಧ ಮಾಡಬಹುದು. |

| | |
|---|---|
| 15) ಹೊರಗಿನ ಯುದ್ಧಗಳಲ್ಲಿ ಸೈನ್ಯ ಅಗತ್ಯ. | 15) ಒಳಗಿನ ಯುದ್ಧಕ್ಕೆ ಸೈನ್ಯದ ಅವಶ್ಯಕತೆ ಇಲ್ಲ. |
| 16) ಹೊರಗಿನ ಯುದ್ಧ ಅಜ್ಞಾನದಿಂದ ಮಾಡಬಹುದು. | 16) ಒಳಗಿನ ಯುದ್ಧ ಜ್ಞಾನದಿಂದ ಮಾಡಬೇಕು. |

ಯುದ್ಧ ಎಂದರೆ ಆಯುಧಗಳಿಂದ ಮಾಡುವುದೇ ಎಂದು ಅಂದುಕೊಳ್ಳಬಾರದು. ಯುದ್ಧ ಎರಡು ವಿಧಗಳಾಗಿ ಇದೆ.

ಇಲ್ಲಿ ಮುಖ್ಯವಾಗಿ ತಿಳಿಯಬೇಕಾಗಿರುವುದು ಏನೆಂದರೆ, ಖುರ್‌ಆನ್‌ನಲ್ಲಿ ಯುದ್ಧ ಎಂಬ ಪದವನ್ನು ಬಳಸಿದರೂ, ಅದು ದೇವರಮಾರ್ಗದಲ್ಲಿ ಯುದ್ಧವೇಯಾಗಲಿ, ಪ್ರಪಂಚ ಮಾರ್ಗದಲ್ಲಿನ ಹೊರಗಿನ ಯುದ್ಧ ಅಲ್ಲವೆಂದು ತಿಳಿಯಬೇಕು. ಹಾಗಲ್ಲದೆ ದುಪ್ಪಟಿ ಎಂದರೆ ಹೊದ್ದುಕೊಳ್ಳುವುದೆಂದು, ಕತ್ತಿ ಎಂದರೆ ಇರಿಯುವುದು ಎಂದು ಅಂದುಕೊಳ್ಳಬಾರದು. ದುಪ್ಪಟಿ ಎಂದರೆ ಹೊದ್ದುಕೊಳ್ಳುವುದೇ ಅಲ್ಲದೆ ಹಾಸಿಕೊಳ್ಳುವುದಕ್ಕೂ ಸಹ ಕೆಲಸಕ್ಕೆ ಬರುತ್ತದೆ. ಹಾಗೆಯೇ ಕತ್ತಿ ಎಂದರೆ ಇರಿಯುವುದೇ ಅಲ್ಲ ತರಕಾರಿಯನ್ನು ಕತ್ತರಿಸುವುದೆಂದು ಸಹ ಅರ್ಥ ಮಾಡಿಕೊಳ್ಳಬೇಕು. ಹಾಗೇ ಯುದ್ಧ ಎನ್ನುತ್ತಲೇ ಮನುಷ್ಯರನ್ನು ಸಾಯಿಸುವುದೇ ಅಲ್ಲ, ಮನುಷ್ಯರನ್ನು ಯಾವಾಗಲೂ ಮರಣಿಸದಂತೆ ಮೋಕ್ಷದಲ್ಲಿ ಇಡುವುದೆಂದು ಸಹ ತಿಳಿಯಬಹುದು.

ಇದೆಲ್ಲಾ ಗಮನಿಸಿದ ನಂತರ ಜೀಹಾದ್ ಎಂದು, ಪವಿತ್ರಯುದ್ಧವೆಂದು ಹೆಸರು ಇಟ್ಟುಕೊಂಡು, ಅದನ್ನು ದೈವಗ್ರಂಥಗಳಿಗೆ ಜೋಡಿಸಿ ಇಡುವುದರಿಂದ ದೈವಗ್ರಂಥಗಳಿಗು ಸಹ ಮರ್ಯಾದೆ ಇಲ್ಲದಹಾಗೆ ಮಾಡಿದಂತಾಗುತ್ತಿದೆ. ಆದ್ದರಿಂದ ಖುರ್‌ಆನ್ ಗ್ರಂಥದಲ್ಲಿ **ಜೀಹಾದ್** ಅನ್ನೊ ಪದವೇ ಇಲ್ಲವೆಂದು ಹೇಳಿದ್ದೇವೆ. ಖುರ್‌ಆನ್ ಗ್ರಂಥದಲ್ಲಿ ಅಲ್ಲಲ್ಲಿ ದೇವರ ಮಾರ್ಗದಲ್ಲಿ ಹೋರಾಟವೆಂದು, ದೇವರ ಮಾರ್ಗದಲ್ಲಿ ಧರ್ಮಯುದ್ಧವೆಂದು ಇದೆಯಾಗಲಿ, ಜೀಹಾದ್ ಎಂಬ ಪದವೇ ಇಲ್ಲ. ದೈವಗ್ರಂಥವಾದ ಖುರ್‌ಆನ್ ಗ್ರಂಥದಲ್ಲಿ ಇಲ್ಲದ ಪದವನ್ನು ಹಿಡಿದುಕೊಂಡು ಮತದಲ್ಲಿ ಮುಖ್ಯವಾದ ಕಾರ್ಯವಾಗಿ ಅದನ್ನು ಕುರಿತು

ಹೇಳಿಕೊಳ್ಳಬೇಕಾದ ಅವಶ್ಯಕತೆ ಏನಿದೆ? ದೇವರು ತನ್ನ ಗ್ರಂಥಗಳಲ್ಲಿ ಹೇಳದಿರುವುದನ್ನು ಕುರಿತು ಮಾತನಾಡಿಕೊಳ್ಳುವುದು, ಮುಖ್ಯವಾಗಿ ಮಾಡುವುದು, ದೇವರಿಗೆ ಇಷ್ಟವಿಲ್ಲದ ಕೆಲಸವಾಗುತ್ತದೆ. ದೇವರಿಗೆ ಇಷ್ಟವಿಲ್ಲದ ಹೊರಗಿನ ಯುದ್ಧವನ್ನು, ಮನುಷ್ಯರನ್ನು ಸಾಯಿಸುವ ಕಾರ್ಯವನ್ನು ಪವಿತ್ರಯುದ್ಧ ಎಂದು ಅನ್ನಬಾರದು.

**ಮುಸ್ಲಿಮ್ :–** ನೀವು ಹೇಳುವುದೆಲ್ಲಾ ಸತ್ಯವೆ ಎನಿಸಿದರೂ, ಒಂದುಕಡೆ ನನ್ನಲ್ಲಿ ಸ್ವಲ್ಪ ಅನುಮಾನ ಪೀಡಿಸುತ್ತಲೇ ಇದೆ. ಖುರ್‌ಆನ್ ಗ್ರಂಥದಲ್ಲಿ ಬಾಹ್ಯಯುದ್ಧವನ್ನು ಕುರಿತೆ ಹೇಳಿದ್ದಾರೆಂದು ನಾವು ನಂಬುವಂತೆ **ಮೂರನೆಯ ಸೂರಾ (3) 140ನೇ ಆಯತ್‌ನಲ್ಲಿ** ಇದೆಯೆಂದು ಅಂದುಕೊಳ್ಳುತ್ತಿದ್ದೇನೆ. ಆ ವಾಕ್ಯದಲ್ಲಿ ಇರುವುದು ಜೀಹಾದ್‌ಯೇ ಎಂದು ನಮ್ಮ ಹಿರಿಯರೆಲ್ಲರೂ ಹೇಳುತ್ತಿದ್ದಾರೆ. ಇದಕ್ಕೆ ನೀವು ಏನು ಹೇಳುತ್ತೀರಾ?

**ನಾನು :–** ನೀವು ಏನು ಹೇಳಿದರೂ ನಾನು ಹೊರಗಿನ ಯುದ್ಧವನ್ನು ಒಪ್ಪಿಕೊಳ್ಳುವುದಿಲ್ಲ. ನಾನೇ ಅಲ್ಲ ದೇವರು ಸಹ ಒಪ್ಪಿಕೊಳ್ಳುವುದಿಲ್ಲ. ಅಂತಹದರಲ್ಲಿ ಯಾವ ಪಾರಾದಲ್ಲಾಗಲಿ, ಯಾವ ಸೂರಾದಲ್ಲಾಗಲಿ, ಯಾವ ಆಯತ್‌ನ್ನಾಗಲಿ ದೇವರು ಬಾಹ್ಯಯುದ್ಧವನ್ನು ಕುರಿತು ಹೇಳಿರುವುದಿಲ್ಲ. ಸರಿ! ನೀನು ಹೇಳಿದ **3ನೇ ಸೂರಾ 140ನೇ ಆಯತ್‌ನ್ನು** ನೋಡೋಣ ಅದರಲ್ಲಿ ಹೀಗೆ ಇದೆ. **"ಒಂದುವೇಳೆ ಈಗ ನೀವು ಗಾಯಪಟ್ಟರೆ ವಾಸ್ತವಕ್ಕೆ ಆ ಜಾತಿಯವರು (ನಿಮ್ಮ ವಿರೋಧಿಗಳು) ಸಹ ಅದೇ ವಿಧವಾಗಿ ಗಾಯಪಟ್ಟಿದ್ದಾರೆ, ನಾವು ಇಂತಹ ದಿನಗಳನ್ನು ಪ್ರಜೆಗಳ ಮಧ್ಯೆ ತಿರುವುತ್ತಾ ಇರುತ್ತೇವೆ. ಮತ್ತು ಅಲ್ಲಾಹ್ ನಿಮ್ಮಲ್ಲಿ ನಿಜವಾದ ವಿಶ್ವಾಸಿಗಳ್ಯಾರೊ ನೋಡುವುದಕ್ಕೆ ಮತ್ತು ಸತ್ಯಸ್ಥಾಪನೆಗೆ ತಮ್ಮ ಪ್ರಾಣಗಳನ್ನು ತ್ಯಾಗ ಮಾಡುವವರನ್ನು ಆರಿಸಿಕೊಳ್ಳುವುದಕ್ಕೆ ಹೀಗೆ ಮಾಡುತ್ತಾ ಇರುತ್ತಾನೆ. ವಾಸ್ತವಕ್ಕೆ ಅಲ್ಲಾಹ್ ದುರ್ಮಾರ್ಗರನ್ನು ಪ್ರೇಮಿಸುವುದಿಲ್ಲ"** ಎಂದು ಅಲ್ಲಿ ಹೇಳುವುದಾಗಿದೆ. ಈ ವಾಕ್ಯದಲ್ಲಿ ಗಾಯಪಡುವುದು, ಪ್ರಾಣತ್ಯಾಗ ಮಾಡುವುದು ಎಂದು ಇರುವುದರಿಂದ ಅದು ನಿಜವಾಗಲೂ ಹೊರಗಿನ ಯುದ್ಧವೆ ಎಂದು

ಅಂದುಕೊಳ್ಳುವುದಕ್ಕೆ ಅವಕಾಶವಿದೆ. ಇಲ್ಲಿ ಮುಖ್ಯವಾಗಿ ಹೇಳಿಕೊಳ್ಳಬೇಕಾದ ವಿಷಯವೊಂದಿದೆ. ಅದೇನೆಂದರೆ! ಈ ವಾಕ್ಯದ ಕೊನೆಯಲ್ಲಿ **"ಅಲ್ಲಾಹ್ ದುರ್ಮಾರ್ಗರನ್ನು ಪ್ರೇಮಿಸುವುದಿಲ್ಲ"** ಎಂದು ಇದೆ. ಬಾಹ್ಯಯುದ್ಧ ದೇವರ ಲೆಕ್ಕದಲ್ಲಿ ಇತರರನ್ನು ಬಾಧಿಸುವ ದುರ್ಮಾರ್ಗವೇ ಆಗುವುದರಿಂದ ಅದನ್ನು ಖಂಡಿಸುತ್ತಾ ದೇವರು ದುರ್ಮಾರ್ಗರನ್ನು ಪ್ರೇಮಿಸುವುದಿಲ್ಲ ಎಂದು ಹೇಳಿದ್ದಾನೆ. ಅಷ್ಟೇ ಅಲ್ಲದೆ ಪ್ರಾಣತ್ಯಾಗ ಯುದ್ಧದಲ್ಲಿಯೇ ಅಲ್ಲ ಎಲ್ಲಿಯಾದರೂ ನಡೆಯಬಹುದು. ಈ ವಾಕ್ಯದಲ್ಲಿ ಸತ್ಯಸ್ಥಾಪನೆಗಾಗಿ ಎಂದು ಅಂದರೆ ಜ್ಞಾನವನ್ನು ನೆಲೆಗೊಳಿಸಲು ಎಂದು ಅರ್ಥ. ಸತ್ಯಸ್ಥಾಪನೆಗು ಪ್ರಾಣಗಳನ್ನು ಸಹಿತ ಲೆಕ್ಕಮಾಡದವನನ್ನು ಆಯ್ಕೆ ಮಾಡಿಕೊಳ್ಳುವುದಕ್ಕೆ, ದೇವರು ವಿಶ್ವಾಸಿಗಳ್ಯಾರೊ ಗುರುತಿಸುವುದಕ್ಕೆ, ದೇವರು ಅಪಾಯಕರ ದಿನಗಳನ್ನು ಗಾಯಪಡುವುದಕ್ಕೆ ಅವಕಾಶವಿರುವ ದಿನಗಳನ್ನು, ಒಂದೊಂದುಸಲ ದೇವರು ಸೃಷ್ಟಿಸುತ್ತಾ ಇರುತ್ತಾನೆ. ದೇವರು ಮನುಷ್ಯರ ಮಧ್ಯೆ ಕಾರ್ಯಗಳಲ್ಲಿಯೊ, ಸಮಸ್ಯೆಗಳಲ್ಲಿಯೊ ಸೃಷ್ಟಿಸಿ ಗೊಂದಲ ಬೀಳುವಂತೆ ಮಾಡಿ ಮನುಷ್ಯನಲ್ಲಿನ ತಾಳ್ಮೆಯನ್ನು ಪರೀಕ್ಷಿಸುತ್ತಿರುತ್ತಾನೆ. ಅಷ್ಟೇ ಆದರೆ ಅಪಾಯಕರವಾದ ದಿನಗಳನ್ನು, ಗಾಯಗಳನ್ನು, ಪ್ರಾಣತ್ಯಾಗಗಳನ್ನು ದೇವರು ಸೃಷ್ಠಿಸಿ ಮನುಷ್ಯನನ್ನು ಭಯವಿಟ್ಟು ಪರೀಕ್ಷಿಸುವುದೆಯಾಗಲಿ, ವಾಸ್ತವ ಯುದ್ಧ ಹೊರಗೆ ಮಾಡುವ ಯುದ್ಧ ಎಂದು ಅಂದುಕೊಳ್ಳಬಾರದು.

ಇದೇ ವಿಷಯವನ್ನೇ ಪ್ರಸ್ತಾವಿಸುತ್ತಾ **47ನೇ ಸೂರಾ 31ನೇ ಆಯತ್‌ನಲ್ಲಿ** ಹೀಗೆ ಹೇಳಿದ್ದಾನೆ. **"ನಿಶ್ಚಯವಾಗಿ ನಿಮ್ಮಲ್ಲಿ ಧರ್ಮಯುದ್ಧ ಮಾಡುವವರ್ಯಾರೊ, ಮತ್ತು ಸಹನ ವಹಿಸುವವರು ಯಾರೋ ನೋಡುವವರೆಗು ನಾವು ನಿಮ್ಮನ್ನು ತಪ್ಪದೆ ಪರೀಕ್ಷಸುತ್ತೇವೆ. ಮತ್ತು ನಾವು ನಿಮ್ಮ ಪ್ರಜ್ಞಾವಚನಗಳನ್ನು ಸಹ ಪರೀಕ್ಷಿಸುತ್ತೇವೆ"** ಎಂದು ಹೇಳುವುದು ನಡೆದಿದೆ. ಮೇಲಿನ ವಾಕ್ಯದಲ್ಲಾಗಲಿ, ಕೆಳಗಿನ ವಾಕ್ಯಗಳಲ್ಲಾಗಲಿ, ಬಾಹ್ಯಯುದ್ಧಕ್ಕೆ ಸಂಬಂಧಿಸಿದ ವಿಷಯವೆ ಇಲ್ಲ. 3ನೇ ಸೂರಾ 140ನೇ ವಾಕ್ಯದಲ್ಲಿ ದೇವರು ದುರ್ಮಾರ್ಗರನ್ನು ಪ್ರೇಮಿಸುವುದಿಲ್ಲ ಎಂದು ಹೇಳುವುದನ್ನು, 47ನೇ ಸೂರಾ 31ನೇ ವಾಕ್ಯದಲ್ಲಿ ನಾವು ನಿಮ್ಮ ಪ್ರಜ್ಞಾವಚನಗಳನ್ನು

ಸಹ ಪರೀಕ್ಷಿಸುತ್ತೇವೆ ಎಂದು ಹೇಳುವುದರಲ್ಲಿ, ಇದೆಲ್ಲವೂ ಬಾಹ್ಯಸಂಬಂಧ ಕಾರ್ಯವು ಅಲ್ಲ, ಅಂತರಂಗದಲ್ಲಿ ಬುದ್ಧಿಗೆ ಸಂಬಂಧಿಸಿದ ವಿಷಯವೆಂದು ತಿಳಿದುಹೋಗುತ್ತಿದೆ. ಕೆಳಗಿನ ವಾಕ್ಯದಲ್ಲಿ ಸ್ಪಷ್ಟವಾಗಿ ಧರ್ಮಯುದ್ಧ ಮಾಡುವವರ್ಯಾರೊ, ಸಹನ ವಹಿಸುವವರ್ಯಾರೊ ನೋಡುವವರೆಗು ನಿಮ್ಮನ್ನು ತಪ್ಪದೆ ಪರೀಕ್ಷಿಸುತ್ತೇನೆ ಎಂದು ಹೇಳಿದ್ದಾನೆ ಅಲ್ಲವೆ! ಪರೀಕ್ಷೆ ಎಂದರೆ ಪೇಪರ್ ಪೆನ್ನುನಿಂದ ಬರೆಯುವುದು ಅಲ್ಲ. ದೇವರ ಪರೀಕ್ಷೆಗಳೆಲ್ಲವೂ ಕಾರ್ಯರೂಪದಲ್ಲಿ ಇರುತ್ತವೆ. ಆ ಕಾರ್ಯಗಳು ಗಾಯಗಳು ಆಗುವವಾದರೂ ಆಗಬಹುದು. ಇಲ್ಲದೆ ಪ್ರಾಣ ಹೋಗುತ್ತದೇನೊ ಎಂಬ ಭಯವನ್ನು ಉಂಟುಮಾಡುವವಾದರೂ ಆಗಬಹುದು. ಉದಾಹರಣೆಗೆ ಅಂತಹ ಪರೀಕ್ಷೆ ಕಾರ್ಯಗಳನ್ನು ಒಂದನ್ನು ಹೇಳಿಕೊಂಡು ನೋಡೋಣ.

ಒಬ್ಬ ಭಕ್ತನು ದೇವರ ಸೇವೆ ಮಾಡುವುದಕ್ಕೋಸ್ಕರ ನಮ್ಮ ಆಶ್ರಮದಲ್ಲಿ ಕೆಲಸ ಮಾಡುವುದಕ್ಕೆ ಬಂದಿದ್ದಾನೆ. ಆತನು ಸ್ವಚ್ಛಂದವಾಗಿ ಸೇವೆ ಮಾಡುವುದಕ್ಕೆ ಬಂದಾಗ ಆತನಿಗೆ ಒಂದು ಅಪಘಾತ ನಡೆದಿದೆ. ಆ ಅಪಘಾತದಲ್ಲಿ ಕಾದಎಣ್ಣೆ ಮೇಲೆ ಬೀಳುವುದು ಕಾಲುಗಳು ಸ್ವಲ್ಪ ಸುಡುವುದು ನಡೆದಿದೆ. ವಡೆಗಳು ಮಾಡುವ ಸಮಯದಲ್ಲಿ ಚೆನ್ನಾಗಿ ಕಾದಿರುವ ಎಣ್ಣೆ ಮೇಲೆಬೀಳುವುದು ನೋಡಿದರೆ ಸತ್ತುಹೋಗುತ್ತಾರೇನೋ ಎನ್ನುವಷ್ಟು ಭಯವನ್ನು ಉಂಟುಮಾಡುವು ದಾಗಿ ಆ ದೃಶ್ಯವಿದೆ. ಸಾವಿನ ಪರಿಸ್ಥಿತಿ ಬಾರದಿದ್ದರೂ ಸ್ವಲ್ಪಮಟ್ಟಿಗೆ ಗಾಯಗಳು ಆಗುವುದೂ, ಪುನಃ ಕೆಲವು ದಿನಗಳಿಗೆ ಗುಣವಾಗುವುದು ನಡೆದಿದೆ. ಇಲ್ಲಿ ದೇವರ ಸೇವೆ ಮಾಡುವುದಕ್ಕೆ ಬಂದಿರುವ ವ್ಯಕ್ತಿಯನ್ನು ಪರೀಕ್ಷಿಸುವುದಕ್ಕೆ ನಾವು ಇಂತಹ ದಿನಗಳನ್ನು ಪ್ರಜೆಗಳ ಮಧ್ಯೆ ತಿರುವುತ್ತಿರುತ್ತೇವೆ ಎಂದು ಹೇಳಿದಹಾಗೆ ದೇವರೆ ಪರೀಕ್ಷೆ ನಿಮಿತ್ತ ಹಾಗೆ ಮಾಡಿದ್ದಾನೆಂದು ಮೇಲಿನ ವಾಕ್ಯಗಳನ್ನು ಅನುಸರಿಸಿ ತಿಳಿಯುತ್ತದೆ. 3ನೇ ಸೂರಾ 140ನೇ ಆಯತ್‌ನಲ್ಲಿ ಹೇಳಿದಹಾಗೆ ಕೆಲವು ಕೆಟ್ಟದು ನಡೆಯುವ ದಿನಗಳನ್ನು ಸಂಘಟನೆಗಳನ್ನು ತನ್ನ ಭಕ್ತರ ಮೇಲೆಯೆ ದೇವರು ವಿಧಿಸಿ ನೋಡುತ್ತಿದ್ದಾನೆಂದು ಸ್ವಲ್ಪಮಟ್ಟಿಗೆ ಅರ್ಥವಾಗಿದೆ. ದೇವರ ಸೇವೆಯಲ್ಲಿ ಜ್ಞಾನ ಪ್ರಚಾರ ಮುಖ್ಯವಾದ ಸೇವೆಯಾಗಿ ನಾವು ಹೇಳುತ್ತಿರುತ್ತೇವೆ.

ಅಂತಹ ಜ್ಞಾನಪ್ರಚಾರ ಸೇವೆಯಲ್ಲಿ ಪಾಲ್ಗೊಳ್ಳುವುದಕ್ಕೆ ಮೂರು ಕಿಲೋಮೀಟರ್‌ಗಳ ದೂರದಲ್ಲಿರುವ ನಮ್ಮ ಪ್ರಚಾರವಾಹನದ ಹತ್ತಿರಕ್ಕೆ ಬರಬೇಕೆಂದು ಒಂದು ವೈಶ್ಯ ಕುಟುಂಬದಲ್ಲಿನ ಗಂಡಹೆಂಡತಿ ಇಬ್ಬರು ಮನೆ ಹತ್ತಿರದಿಂದ ಮೋಟರ್‌ಸೈಕಲ್ ಮೇಲೆ ಹೊರಟಿದ್ದಾರೆ. ಅವರದು ಒಳ್ಳೆಯ ಉದ್ದೇಶವೇ ಆದರೂ, ಅವರ ಸಹನೆಯನ್ನು ಪರೀಕ್ಷಿಸುವುದಕ್ಕೆ ದೇವರು ಅವರ ವಾಹನಕ್ಕೆ ಅಂತಹ ವಾಹನವೆ ಸ್ವಲ್ಪ ತಗಲುವಂತೆ ಮಾಡಿ, ಗಂಡಹೆಂಡತಿಯನ್ನು ಕೆಳಗೆ ಬೀಳುವಂತೆ ಮಾಡಿ ಸ್ವಲ್ಪ ಗಾಯಪಡಿಸುವುದು ನಡೆದಿದೆ. ಇದೆಲ್ಲವೂ ಮೇಲಿನ ವಾಕ್ಯಗಳಲ್ಲಿ ಹೇಳಿದಹಾಗೆ ನಡೆದಿದೆ. ಆಗ ಯುದ್ಧ ಅಲ್ಲದಿದ್ದರೂ ಗಾಯಗಳು ಆಗುವುದು ನಡೆದಿದೆ ಅಲ್ಲವೆ! ಯುದ್ಧ ಅಲ್ಲದಿದ್ದರೂ ಪ್ರಾಣಾಪಾಯ ನಡೆಯುತ್ತದೇನೊ ಎನ್ನುವಷ್ಟು ಭಯ ಉಂಟಾಗಿದೆ. ಆಗ ಗಾಯಗೊಂಡ ಅವರ ಸಹನೆಯನ್ನು ದೇವರು ನೋಡುತ್ತಿದ್ದಾನೆ. ಹಾಗೆ ಅವರ ವಿವೇಕ ವಚನಗಳನ್ನು ಸಹ ಕೇಳುತ್ತಿದ್ದಾನೆ. ಇಂತಹ ಸಂಘಟನೆಗಳನ್ನು ಪ್ರಜೆಗಳ ಮಧ್ಯೆ ತಿರುಗಿಸಿ ಪರೀಕ್ಷಿಸುತ್ತಿರುತ್ತಾನೆಂದು ಮೇಲಿನ ವಾಕ್ಯಗಳಂತೆ ದೇವರು ಹೇಳುವುದು ನಡೆದಿದೆಯೆಂದು ಮರೆಯಬಾರದು. ಗಾಯಗಳು, ಪ್ರಾಣಾಪಾಯಗಳು ನಡೆಯುವುದಕ್ಕೆ ಬಾಹ್ಯಯುದ್ಧವೇ ಅವಶ್ಯಕತೆ ಇಲ್ಲ. ದೇವರು ಮನುಷ್ಯನನ್ನು ಪರೀಕ್ಷಿಸುವ ನಿಮಿತ್ತ ನಡೆದಿರುವ ಕೆಲಸದಲ್ಲಿ ವಿಧಾನ ಹಾಗಿದೆಯೆಂದು ಗ್ರಹಿಸಬಹುದು.

**ಮುಸ್ಲಿಮ್ :–** ದೇವರು ಎಲ್ಲರಿಗೂ ಅಧಿಪತಿ, ಎಲ್ಲರಲ್ಲಿನ ರಹಸ್ಯ ತಿಳಿದವನು ಎಂದೂ ಭೂಮಿ ಮೇಲೆ ಆಕಾಶದಲ್ಲಿನ ರಹಸ್ಯಗಳೆಲ್ಲವು ದೇವರಿಗೆ ತಿಳಿದಿವೆ ಎಂದು ಖುರ್‌ಆನ್ **2ನೇ ಸೂರಾದಲ್ಲಿ 33ನೇ ಅಯತ್‌ನಲ್ಲಿ** ಇದೆ ನೋಡಿರಿ. **"ನಿಶ್ಚಯವಾಗಿ ನಾನು ಮಾತ್ರವೇ ಭೂಮ್ಯಾಕಾಶಗಳ ಅಗೋಚರ ವಿಷಯಗಳನ್ನು ತಿಳಿದಿವೆಯೆಂದು ನಿಮ್ಮೊಂದಿಗೆ ಹೇಳಲಿಲ್ಲವೇ? ಮತ್ತು ನೀವು ಯಾವುದು ಬಹಿರ್ಗತ ಮಾಡುತ್ತೀರೋ ಮತ್ತು ಯಾವುದನ್ನು ಬಚ್ಚಿಡುತ್ತೀರೋ ಸಹ ನನಗೆ ಚೆನ್ನಾಗಿ ತಿಳಿದಿದೆ."** ಎಂದು ಇದೆ. ಇದನ್ನನುಸರಿಸಿ ದೇವರಿಗೆ ಎಲ್ಲಾ ತಿಳಿದಿರುವವೆ. ಯಾವ ಮನುಷ್ಯನಲ್ಲಿ ಏನಿದೆಯೋ ಆತನಿಗೆ ತಿಳಿದಿದೆ. ಹಾಗಿರುವಾಗ ಯಾವ

ಮನುಷ್ಯನಲ್ಲಿ ಎಷ್ಟು ಸಹನೆ ಇರುವುದೂ, ದೇವರಿಗೆ ತಿಳಿಯದಾ? ಗಾಯ ಮಾಡಿ, ಭಯವಿಟ್ಟು ಪರೀಕ್ಷಿಸದೇ ದೇವರಿಗೆ ತಿಳಿಯದಾ? ಎಲ್ಲಾ ತಿಳಿದ ದೇವರು ಮನುಷ್ಯರನ್ನು ಏಕೆ ಪರೀಕ್ಷಿಸುತ್ತಿದ್ದಾನೆ?

**ನಾನು** :– ಸರ್ವ ಪ್ರಪಂಚದಲ್ಲಿ, ಯಾವ ಮನುಷ್ಯನಲ್ಲಿ ಏನು ಇರುವುದೂ, ಏನು ಮಾಡಿರುವುದೂ ದೇವರಿಗೆ ಚೆನ್ನಾಗಿ ತಿಳಿದಿವೆ. ಹಾಗಿರುವಾಗ ಯಾರಲ್ಲಿ ಎಷ್ಟು ಸಹನೆ ಇರುವುದು ಎನ್ನುವ ವಿಷಯವೂ ಸಹ ದೇವರಿಗೆ ಚೆನ್ನಾಗಿ ತಿಳಿದಿದೆ. ಆದರೂ ದೇವರು ಮನುಷ್ಯರನ್ನು ಪರೀಕ್ಷೆಗೆ ಗುರಿ ಮಾಡುತ್ತಿದ್ದಾನೆ. ಆ ಪರೀಕ್ಷೆಗಳಲ್ಲಿ ಯಾರಿಗೂ ಅರ್ಥವಾಗದ ಅಪಾಯಗಳನ್ನು ಕಲ್ಪಿಸಿ ಯಾರು ಎಷ್ಟು ಭಯಪಡುತ್ತಿರುವುದೂ, ಯಾರು ಏನೆಂದುಕೊಳ್ಳುತ್ತಿರುವುದು ನಮೋದು ಮಾಡುತ್ತಿದ್ದಾನೆ. ಎಲ್ಲಾ ತಿಳಿದು ಹಾಗೆ ಏಕೆ ಮಾಡುತ್ತಿದ್ದಾನೆಂದರೆ! ದೈವ ಮಾರ್ಗದಲ್ಲಿ ಯಾರಿಗೆ ಎಷ್ಟು ಸಹನೆ ಇದೆಯೋ ದೇವರಿಗೆ ಮೊದಲೇ ತಿಳಿದಿದೆ. ಆದರೆ ಭಕ್ತನಾದವನಿಗೆ ತನಗೆ ಎಷ್ಟು ಸಹನೆ ಇದೆಯೋ ತಿಳಿಯಬೇಕೆಂದರೆ ಪರೀಕ್ಷೆ ಇರಬೇಕಾದ್ದೇ, ಆದ್ದರಿಂದ ಪರೀಕ್ಷ ಮನುಷ್ಯನಿಗೇ ಅವಶ್ಯ, ಆತನ ಭಾವವೂ ಸಹ ಏನಿದೆಯೋ ಆತನಿಗೆ ತಿಳಿಯುವುದೇ ಮುಖ್ಯ. ಆದ್ದರಿಂದ ಮನುಷ್ಯರಿಗೆ ತನ್ನ ವಿಷಯ ತನಗೆ ತಿಳಿಯುವುದಕ್ಕಾಗಿ ಪರೀಕ್ಷೆ ಅಗತ್ಯ. ಅಷ್ಟೇ ಹೊರತು ದೇವರಿಗೆ ತಿಳಿಯದೆ ಅಲ್ಲ. ಸರ್ವ ಪ್ರಪಂಚದಲ್ಲಿನ ಮನುಷ್ಯರಿಗೆ ಪ್ರತಿ ದಿನ ಸಮಸ್ಯಗಳ ರೂಪದಲ್ಲಿ ಪರೀಕ್ಷೆಗಳು ನಡೆಯುತ್ತಲೇ ಇವೆ. ಅದರಲ್ಲಿ ಕೆಲವರು ಮಾತ್ರ ಗೆಲ್ಲುತ್ತಿದ್ದಾರೆ. ಉಳಿದ ಎಲ್ಲರೂ ಸೋತುಹೋಗುತ್ತಿದ್ದಾರೆ. ಯಾರ ಸೋಲು ಅವರಿಗೆ ತಿಳಿದಿದೆ. ಆದರೆ ಎಲ್ಲರ ಸೋಲು ಗೆಲುವು ದೇವರಿಗೆ ಮಾತ್ರ ತಿಳಿದಿವೆ.

**ಮುಸ್ಲಿಮ್** :– "ಬಾಹ್ಯ ಪ್ರಪಂಚ ಯುದ್ಧ ದೈವ ಮಾರ್ಗದಲ್ಲಿ ಇಲ್ಲವೇ ಇಲ್ಲ. ಒಂದು ವೇಳೆ ಅದು ಇದೆಯೆಂದರೆ ಅಜ್ಞಾನವಾಗುತ್ತದೆ." ಎಂದು ನಿವು ಹೇಳುತ್ತಿದ್ದೀರಲ್ಲವೆ! ಹಾಗಾದರೆ ಗುರುಗಳಾಗಿ ಇರುವವರು, ಬೋಧಕರಾಗಿ ಇರುವವರು ಎಷ್ಟೋ ಬಾಹ್ಯ ಯುದ್ಧಗಳನ್ನು ಕುರಿತು ಹೇಳಿ ಪ್ರಜೆಗಳನ್ನು ತಪ್ಪು ಮಾರ್ಗದೊಳಗೆ ಕಳುಹಿಸುತ್ತಿದ್ದಾರೆ. ಅಂತಹವರಿಗೆ ದೇವರ ಶಿಕ್ಷೆ ಇರುತ್ತದಾ?

**ನಾನು :–** ದೇವರ ಜ್ಞಾನವನ್ನು ವಕ್ರ ಮಾರ್ಗ ಹಿಡಿಸಿದವನಿಗೆ ತಪ್ಪದೇ ಶಿಕ್ಷೆ ಇರುತ್ತದೆ. ಈ ವಿಷಯವನ್ನು ಕುರಿತು **2ನೇ ಸೂರಾ 159ನೇ ವಾಕ್ಯದಲ್ಲಿ** ಹೀಗೆ ಇದೆ ನೋಡಿರಿ. **"ನಿಶ್ಚಯದಿಂದ ಹೇಳುತ್ತಿದ್ದೇನೆ. ಯಾರಾದರೆ ನಾವು ಅವತರಿಸುವಂತೆ ಮಾಡಿರುವ ಸ್ಪಷ್ಟವಾದ ಬೋಧನೆಗಳನ್ನು ಮಾರ್ಗದರ್ಶಕತ್ವಗಳನ್ನು, ಪ್ರಜೆಗಳಿಗಾಗಿ ದಿವ್ಯ ಗ್ರಂಥದಲ್ಲಿ ಸ್ಪಷ್ಟಪಡಿಸಿದ ನಂತರ ಕೂಡಾ ಬಚ್ಚಿಡುತ್ತಾರೋ ಅವರನ್ನು ಅಲ್ಲಾಹ್ ತಪ್ಪದೇ ಶಿಕ್ಷಿಸುತ್ತಾನೆ, ಶಪಿಸುತ್ತಾನೆ, ಬಹಿಷ್ಕರಿಸುತ್ತಾನೆ ಮತ್ತು ಶಪಿಸುವವರೂ ಸಹ ಅವರನ್ನು ಕೂಡಾ ಶಪಿಸುತ್ತಾರೆ."** ಎಂದು ಹೇಳಿದ್ದಾನೆ. ಇದನ್ನನುಸರಿಸಿ ದೇವರ ಜ್ಞಾನದ ಹತ್ತಿರ ಭಯವಿಲ್ಲದೇ ಹೋದವರಿಗೆ, ದೇವರ ಜ್ಞಾನ ಒಂದಿದ್ದರೇ ಇನ್ನೊಂದು ಬೋಧಿಸುವವರಿಗೆ, ಇಲ್ಲದ ಜ್ಞಾನ ಇದ್ದಂತೆ ತಾನೇ ಸ್ವತಃವಾಗಿ ಕಲ್ಪಿಸಿ ಹೇಳುವವನಿಗೆ, ದೈವ ಮಾರ್ಗದಲ್ಲಿ ದೈವ ಜ್ಞಾನದಲ್ಲಿ ಇಲ್ಲದ ಬಾಹ್ಯ ಯುದ್ಧವನ್ನು ಕುರಿತು ಹೇಳಿ ಅದೇ ಜೀಹಾದ್ ಎಂದು ನಂಬಿಸಿ ಪ್ರಜೆಗಳನ್ನು ಜೀಹಾದೀಗಳಾಗಿ ಬದಲಾಯಿಸಿ, ದೇವರು ಹೇಳದ ಯುದ್ಧಗಳನ್ನು, ದೇವರು ಹೇಳದ ಹಿಂಸೆಗಳನ್ನು ರೇಕೆತ್ತಿಸುವವನನ್ನು, ಅಜ್ಞಾನಕ್ಕೆ ಮೂಲ ವಾದವನಾಗಿ ದೇವರು ಅವನನ್ನು ಗುರುತಿಸಿ, ಅವನಿಗೆ ಕೆಲವು ಯುಗಗಳ ಪಾಪವನ್ನು ಅತ್ತಗಟ್ಟುತ್ತಾನೆ. ಅದರಿಂದ ಅವನು ಶಾಶ್ವತವಾಗಿ ನರಕ ಬಾಧೆಗಳನ್ನು ಅನುಭವಿಸಬೇಕಾಗಿ ಬರುತ್ತದೆ. ದೇವರ ದೃಷ್ಠಿಯಲ್ಲಿ ಅಂತಹವನಿಗೆ ಎಂದಿಗೂ ಕ್ಷಮಾಪಣೆ ಇರುವುದಿಲ್ಲ. ಆದ್ದರಿಂದ ಪ್ರಪಂಚ ವಿಷಯಗಳಲ್ಲಿ ಹೇಗಿದ್ದರೂ ಪರವಾಗಿಲ್ಲ. ದೇವರ ಜ್ಞಾನದ ಹತ್ತಿರ ಜಾಗ್ರತೆಯಾಗಿರಬೇಕೆಂದು ತಿಳಿಸುತ್ತಿದ್ದೇವೆ.

# ಮುಕ್ತಾಯ



**ಒಂದು ವಿಷಯವನ್ನು ಸಮರ್ಥಿಸುವುದಕ್ಕೆ ಶಾಸ್ತ್ರ ಎಷ್ಟು ಅವಶ್ಯವೋ, ಹಾಗೇ ಒಂದು ವಿಷಯವನ್ನು ಖಂಡಿಸುವುದಕ್ಕೆ ಶಾಸ್ತ್ರ ಅಷ್ಟೇ ಅವಶ್ಯವಾಗುತ್ತದೆ.**

**ಅಸತ್ಯವನ್ನು ಸಾವಿರ ಮಂದಿ ಹೇಳಿದರೂ ಅದು ಸತ್ಯವಲ್ಲ,**
**ಸತ್ಯವನ್ನು ಸಾವಿರ ಮಂದಿ ಅಲ್ಲವೆಂದರೂ ಅದು ಅಸತ್ಯವಲ್ಲ.**

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಸುವಾರ್ತ ಕ್ರೈಸ್ತವ ಸಂಘ




## ಸುವಾರ್ತ ಕ್ರೈಸ್ತವ ಸಂಘ (S.K.S)

(Regd.No.: 159/2015)

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@suvarthakraisthavasangham.org



*www. suvarthakraisthavasangham.org*

# ಜೀಹಾದ್ ಎಂದರೆ ಯುದ್ಧವಾ?



Author :
The Only Guru of Three Religions
The Spiritual Emperor, Thraitha Theorem Originator
Sri Acharya Prabodhananda Yogeeshwarulu

www.thraithashakam.org